ಕರ್ಣಾಟಕ ನಂದಿಯ ಬಹುಮಾನ ಪುಸ್ತಕ (ವರ್ಷ ೩)

ಶ್ರೀಃ

# ಶ್ರೀ ಲಕ್ಷ್ಮೀನೃಸಿಂಹಸ್ತೋತ್ರಂ.

"ಸಿದ್ಧಿಂ ಸರ್ವಾಣಿ ಭೂತಾನಿ
ಭೂತಾನಾಂ ಚ್ಚೈವ ಯಃಪ್ರಭುಃ |
ಯಾಸ್ಯನ್ತಿ ಮಮಯೇ(ಚಾನ್ಯೇ
ರಕ್ಷ್ಯದೃಷ್ಟಾಃ ಪತಿಗೋಚರಾಃ ||"

ಸತೀಹಿತೈಷಿಣೀ ಮಾತೃಮಂದಿರಂ
ನಂಜನಗೂಡು

ದಿ ಸಿಟಿ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿದೆ.
ಬೆಂಗಳೂರು ಸಿಟಿ.

1919.



ಶ್ರೀ.

# ಶ್ರೀ ಲಕ್ಷ್ಮೀನೃಸಿಂಹಸ್ತೋತ್ರಂ.

(ಅಲಂಕಾರ ಗ್ರಂಥವು)

---

ಗ್ರಂಥಕರ್ತ

ಶ್ರೀಯುತ ಎಸ್. ಎಸ್. ನರಹರಯ್ಯ, ಬಿ ಎ
ಎಲ್ ಎಲ್. ಬಿ. ಅವರು.

ಪ್ರಥಮ ಮುದ್ರಣ, ೧೦೦೦ ಪ್ರತಿಗಳು.



ಕ್ರಯ ೦—೧೦—೦

೧೯೧೯



ಬೆಂಗಳೂರು ಸಿಟಿ ಕೋಟೆಯಲ್ಲಿರುವ ದಿ ಸಿಟಿ ಪ್ರೆಸ್ಸಿನ ಪ್ರೊಪ್ರೈಟರ್,

ಮ|| ಕೆ. ಶಿಂಗಳಾಚಾರ್ಯರವರಿಂದ

ಮುದ್ರಿಸಲ್ಪಟ್ಟಿತು.

೧೯೧೯

ಶ್ರೀಃ



" ಸತ್ಯಜ್ಞಾನಸುಖಸ್ವರೂಪಮಮಲಂ ಕ್ಷೀರಾಬ್ಧಿಮಧ್ಯಸ್ಥಿತಂ
ಯೋಗಾರೂಢಮತಿಪ್ರಸನ್ನವದನಂ ಭೂಷಾಸಹಸ್ರೋಜ್ಜ್ವಲಮ್ ।
ತ್ರ್ಯಕ್ಷಂ ಚಕ್ರಪಿನಾಕಸಾಭಯವರಾನ್ ಬಿಭ್ರಾಣಮರ್ಕಚ್ಛವಿಂ
ಛತ್ರೀಭೂತಫಣೀಂದ್ರಮಿಂದುಧವಲಂ ಲಕ್ಷ್ಮೀನೃಸಿಂಹಂಭಜೇ ॥"

ಶ್ರೀಃ

## ಸಮರ್ಪಣೆ

—o—

" ಸ್ವಪ್ನೇ ರವೀಂದ್ರವಾಸ ಮುನೀಂದ್ರರೂಪೀ
ಸ್ವಯಂ ಸಮಾಗತ್ಯ ಮಮಾಪಿದೇವಃ |
ತ್ರಿದಂಡಕಾಷಾಯ ಮದನ್ಮದಾಯ
ಸ್ತ್ವಂ ಶ್ರೀ ನೃಸಿಂಹಂ ಶರಣಂ ಪ್ರಪದ್ಯೆ || "
" ತ್ವದ್ದತ್ತವಾಚಾ ತವ ಕಿಂಕರೇಣ
ತ್ವತ್ಪ್ರೀತಿಕಾಮೇನ ಮಯಾನಕೃತೇನ |
ಸ್ತೋತ್ರೇಣ ಲಕ್ಷ್ಮೀನೃಹರೇ ಸವಿಷ್ಣುಃ
ಪ್ರೀತೋಭವತ್ವಂ ಕರುಣಾರ್ದ್ರ ದೃಷ್ಟಿಃ || "

ಆರ್ತತ್ರಾಣ ಪರಾಯಣನೂ, ಭಕ್ತಪರಾಧೀನನೂ ಪೂರ್ಣಕಾಮನೂ,
ಪ್ರಸನ್ನವದನನೂ, ದಯಾರ್ದ್ರ ಹೃದಯನೂ, ವರದಹಸ್ತನೂ,

ಆದ

ಶ್ರೀ ಲಕ್ಷ್ಮೀನರಸಿಂಹಸ್ವಾಮಿಯ ಚರಣಾರವಿಂದಗಳಲ್ಲಿ

ಈ ಗ್ರಂಥಪುಷ್ಪವನ್ನು

ಅನನ್ಯಭಕ್ತಿಭಾವನೆಯಿಂದ

ಸಮರ್ಪಿಸಿರುವುದು.

—o—

ದಿ ಸಿಟಿ ಪ್ರೆಸ್

ಶ್ರೀರಸ್ತು

ಯಾರೇ ಆಗಲಿ, ತನ್ನ ಗ್ರಂಥಗಳಿಗೆ ಪೀಠಿಕೆಯೆಂದು ಸ್ವಲ್ಪವನ್ನು ಬರೆವುದು ಈಗ ಪದ್ಧತಿಯಾಗಿರುವುದಷ್ಟೆ. ಅದೇ ಮಾರ್ಗವನ್ನು ಅನುಸರಿಸಿ ನಾನೂ ಇಲ್ಲಿ ಒಂದೆರಡು ಮಾತುಗಳನ್ನು ಬರೆವೆನು. ನನಗೆ ಬಾಲ್ಯದಲ್ಲಿ ಛಂದೋಬದ್ಧವಾಗುವಂತೆ ಅಕ್ಷರಗಳನ್ನು ಜೋಡಿಸುವ ಚಾಪಲ್ಯವು ಕೊಂಚವಿತ್ತು. ೧೮೯೯ ನೆಯ 'ಇಸವಿ' ಯಲ್ಲಿ ನಾನು ಎಫ್. ಎ. ಪರೀಕ್ಷೆಗೆ ಓದುತ್ತಿದ್ದಾಗ ಬ್ರ॥ ಸ॥ ಶಿವಶಂಕರಶಾಸ್ತ್ರಿಗಳವರಿಂದ "ಕನ್ನಡಕ್ಕೆ ಪರಿವರ್ತಿಸಲ್ಪಟ್ಟ ಚಂದ್ರಾಲೋಕವು ನನ್ನ ಪಠನೀಯ ಪುಸ್ತಕಗಳಲ್ಲಿ ಒಂದಾಗಿತ್ತು. ನನಗೆ ಸಂಸ್ಕೃತ ಶ್ಲೋಕಗಳು ಬೇಗನೆ ಬಾಯಿಗೆ ಬರುತ್ತಿದ್ದಹಾಗೆ ಕನ್ನಡ ಪದ್ಯಗಳು ಬರುತ್ತಿರಲಿಲ್ಲವಾಗಿ ಅಲಂಕಾರದ ಲಕ್ಷ್ಯಲಕ್ಷಣಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಕಷ್ಟವಾಗಿ ಬರಲು ಈ ವಿಷಯವನ್ನು ನನ್ನ ಸಂಸ್ಕೃತಸಾಹಿತ್ಯಾಚಾರ್ಯರಾದ ಬ್ರಹ್ಮಶ್ರೀ ವಿಶ್ವೇಶ್ವರಶಾಸ್ತ್ರಿಗಳಲ್ಲಿ ಪ್ರಸಂಗ ಸಂಗತಿಯಿಂದ ವಿಜ್ಞಾಪಿಸಿದೆನು. ಅದಕ್ಕವರು " ಸಂಸ್ಕೃತ ಚಂದ್ರಾಲೋಕನವನ್ನೇ ನಿತ್ಯವೂ ಒಂದು ಕಾಲುಘಂಟೆಯಷ್ಟು ಓದಿಬಿಡು " ಎಂದುಹೇಳಿ ಅದರಂತೆ ಹೇಳಿಕೊಡುವುದಕ್ಕೆ ಆರಂಭಿಸಿ, ೮-೧೦ ದಿವಸಗಳಾದ ಮೇಲೆ ಕುವಲಯವನ್ನೇ ಓದುವಂತೆ ಅಪ್ಪಣೆ ಕೊಟ್ಟರು. ಆಗತಾನೇ ನನಗೆ ನೀಲಕಂಠಚಂಪೂಪಾಠವು ಮುಗಿದು ಭಾರತಚಂಪೂಪಾಠವಾಗುತ್ತಿದ್ದರೂ ಆ ಮಹನೀಯರ ಅಭಯ ವಾಕ್ಯದಿಂದ ಧೈರ್ಯಹುಟ್ಟಿ ಕುವಲಯಾನಂದವನ್ನೇ ಓದಲಾರಂಭಿಸಿದೆನು. ಅವರ ಬೋಧನಾಶಕ್ತಿಯನ್ನು ಅವರಲ್ಲಿ ಓದಿದವರೇ ಬಲ್ಲರು, ಅವರಲ್ಲಿ ಓದಿ ಬಂದ ಪಾಠವನ್ನು ಮತ್ತೆ ಓದಿ ಭದ್ರಮಾಡಬೇಕಾದ ಕೆಲಸವೇ ನನಗಿರಲಿಲ್ಲ. ನನಗೆ ಮೇಲೆ ಹೇಳಿದ ಚಾಪಲ್ಯವಿದ್ದುದರಿಂದ ಆ ಆ ದಿವಸದ ಪಾಠಕ್ಕೆ ಲಕ್ಷ್ಯವಾಗುವಂತೆ ಕುಲದೇವತೆಯಾದ ಲಕ್ಷ್ಮೀನೃಸಿಂಹನನ್ನು ಅಧಿಕರಿಸಿ ಕಂದ ಪದ್ಯಗಳನ್ನು ರಚಿಸುತ್ತಿದ್ದೆನು. ಹಾಗೆ ರಚಿತವಾದ ಪದ್ಯಗಳೆಲ್ಲವೂ ಸೇರಿ ಒಂದು ಗ್ರಂಥದಂತೆ ಆದುದರಿಂದ ಅದಕ್ಕೇನಾದರೂ ಒಂದು ಹೆಸರು ಬೇಡವೇ ಎಂದು ಲಕ್ಷ್ಮೀನೃಸಿಂಹಸ್ತೋತ್ರವೆಂದು ಕರೆದೆನು. ಅದೆಲ್ಲಿಯೋ ಸೇರಿಕೊಂಡಿತ್ತು. ಈಚೆಗೆ ನನ್ನ ಪರಮಮಿತ್ರರಾದ ಶ್ರೀಯುತ ಬೆನಗಲ್ ರಾಮರಾಯರವರಿಂದ ಆ ವಿಷಯವನ್ನು ಕೇಳಿ ನಂದಿನೀ ಕರ್ತೃಯರಾದ

ಶ್ರೀಮತಿ ತಿರುಮಲಮ್ಮನವರು ಅದನ್ನು ಪ್ರಕಾಶಪಡಿಸಲಿಚ್ಛಿಸಿದುದರಿಂದ ನಿಮ್ಮ ಸಂತೋಷವೆಂದು ಅವರಿಗೆ ಅದನ್ನು ಕಳುಹಿಸಿದೆನು. ಬಾಲ್ಯದಶೆ ಇನ್ನೂ ನಿಬಿಡವಾಗಿದ್ದಾಗ ಚಾಪಲ್ಯದಿಂದ ಅಕ್ಷರಯೋಜನೆಯನ್ನು ಗ್ರಂಥವೆಂದು ಪ್ರಕಾಶಪಡಿಸುವುದು ಸಾಹಸವೆಂದೂ ಅದನ್ನು ಪರಿಷ್ಕರಿಸುವುದು ಯುಕ್ತವೆಂದೂ ತಿಳಿದಿದ್ದರೂ ಈಗ ನನಗೆ ವ್ಯವಧಾನವಾಗಲೀ ದೇಹಾರೋಗ್ಯವಾಗಲೀ ಇಲ್ಲದುದರಿಂದ ಆ ಕೆಲಸವು ಸಾಗದೆ ಅದು ಹೇಗಿತ್ತೋ ಹಾಗೆಯೇ ಬಿಟ್ಟಿರುವೆನು. ಮುದ್ರಣದೋಷಗಳಾದರೂ ಬೀಳದಂತೆ ಮಾಡಬೇಕೆಂದು ಅಭಿಲಾಷೆಯಾದರೂ ನಾನು ಇಲ್ಲಿರುವುದರಿಂದಲೂ ಅದು ಬೆಂಗಳೂರಲ್ಲಿ ಅಚ್ಚಾಗುತ್ತಿದ್ದುದರಿಂದಲೂ ಒಂದು ಪ್ರೂಫಿಗೆ ಹೆಚ್ಚಾಗಿ ನೋಡಲೂ ಆಗಲಿಲ್ಲ. ಆದುದರಿಂದ ಎಲ್ಲಾ ನ್ಯೂನತೆಗಳನ್ನೂ ಗುಣಜ್ಞರು ಕ್ಷಮಿಸಲೆಂದು ಪ್ರಾರ್ಥಿಸುವೆನು. ಯಾರಿಗಾದರೂ ಪ್ರಯೋಜನಕಾರಿಯಾಗಬಹುದೆಂದು ಅಲಂಕಾರ ಲಕ್ಷಣಗಳನ್ನೂ ಬರೆದು ಸೇರಿಸಿರುವೆನು. ಇದನ್ನು ಪ್ರಕಾಶಪಡಿಸಿದ ಶ್ರೀಮತಿ ತಿರುಮಲಮ್ಮನವರಿಗೂ ಅವರಿಗೆ ಅದನ್ನು ಸೂಚಿಸಿದ ಶ್ರೀಯುತ ರಾಮರಾಯರಿಗೂ ನಾನು ಅತ್ಯಂತ ಕೃತಜ್ಞನಾಗಿರುವೆನು.

ಭರದ್ವಾಜಾಶ್ರಮ, ಪ್ರಯಾಗ
ಶಾಲಿ ಶಕೆ ೧೮೪೧ ವೈಶಾಖ
ಬ॥ ೧೨ ಸಿದ್ಧಾರ್ಥಿ ಸಂ ॥

ಇತಿ

ನರಿಹರಿಶರ್ಮ.

# ಸವಿನಯನಿವೇದನ

ಕಾಳಯುಕ್ತ ಸಂವತ್ಸರದಲ್ಲಿಯೇ ಪ್ರಕಾಶಕ್ಕೆ ಬರಬೇಕಾಗಿದ್ದ ಈ ಗ್ರಂಥವು ಅನೇಕ ಅನಿವಾರ್ಯಗಳಿಂದ ತಡೆಯಲ್ಪಟ್ಟಿದ್ದುದಕ್ಕಾಗಿ, ನಮ್ಮ ನಂದಿನಿಯ ವರ್ಗಣೀದಾರರಲ್ಲಿ ನಾವು ವಚನಭ್ರಷ್ಟರೆನ್ನಿಸಿಕೊಳ್ಳಬೇಕಾಯಿತೆಂಬ ಖೇದವು, ದಯಾಳುವಾದ ಲಕ್ಷ್ಮೀನೃಸಿಂಹಸ್ವಾಮಿಯ ಅನುಗ್ರಹದಿಂದ ನಿವಾರಣವಾಗಿ, ಇಂದಿಗಾದರೂ ಈ ಗ್ರಂಥವು ಪ್ರಕಾಶಕ್ಕೆ ಬರುವಂತಾಯಿತೆಂಬ ಸಂತೋಷವು ನಮಗೆ ಅಪಾರವಾದುದಾಗಿರುವುದು.

ಈ ಗ್ರಂಥಕರ್ತರ ಪೀಠಿಕೆಯಲ್ಲಿ ಸೂಚಿಸಿರುವಂತೆ ಇವರಿಂದ ವಿರಚಿತವಾಗಿರುವ ಉತ್ತಮೋತ್ತಮಗ್ರಂಥಗಳನ್ನು ಪ್ರಕಾಶಕ್ಕೆ ತರುವುದು ದೇಶಭಾಷಾ ಸೇವಕರಿಗೆ ಅವಶ್ಯ ಕರ್ತವ್ಯವೆಂದು ಸೂಚಿಸಿದ ನಮ್ಮ ಹಿತಚಿಂತಕ ಭ್ರಾತೃವರ್ಗೀಯರಾದ ಬಿ. ರಾಮರಾಯರವರ ಅಭಿಪ್ರಾಯವು ನಮಗೆ ಮಾನ್ಯವಾಗಿ ತೋರಿದುದರಿಂದ, ಮೊದಲು ಅಭೀಷ್ಟಫಲಪ್ರದನೂ ದುಷ್ಟನಿಗ್ರಹ ಶಿಷ್ಟ ಸಂರಕ್ಷಕನೂ ಆದ ಲಕ್ಷ್ಮೀನೃಸಿಂಹನ ಅಂಕಿತಕೊಳ್ಳಪಟ್ಟು ವಿದ್ಯಾರ್ಥಿಗಳಿಂದ ಮೊದಲು ಸಕಲರಿಗೂ ಉಪಯೋಗವಾಗುವಂತಹ ಅತ್ಯುಪಯುಕ್ತ ವಿಚಾರಗಳನ್ನೊಳಗೊಂಡಿರುವ ಈ ಗ್ರಂಥವನ್ನೇ ನಂದಿನಿಯ ಬಹುಮಾನ ಪುಸ್ತಕವಾಗಿ ಪ್ರಕಾಶಕ್ಕೆ ತರಲು ಸಂಕಲ್ಪಿಸಿದೆವು. ನಮ್ಮ ಸಂಕಲ್ಪದಂತೆ ತಮ್ಮ ಗ್ರಂಥಗಳನ್ನು ಪ್ರಕಾಶಪಡಿಸಲು ಸಮ್ಮತಿಸಿ, ಕಳುಹಿದುದಕ್ಕಾಗಿ ನಮ್ಮ ಭ್ರಾತೃವರ್ಗೀಯರಾದ ಈ ಗ್ರಂಥಕರ್ತರ ಸೌಜನ್ಯವು ನಮಗೆ ಸಂಸ್ಮರಣೀಯವಾಗಿರುವುದು.

ಈ ಗ್ರಂಥಕರ್ತರಿಂದ ರಚಿತವಾದ ಇನ್ನೂ ಅನೇಕ ಗ್ರಂಥಗಳು ಮುದ್ರಣವಾಗದಿರುವುವು. ಅವುಗಳಲ್ಲಿ ಅತ್ಯುತ್ತಮ ತರದ ವಿಚಾರಗಳನ್ನೊಳಕೊಂಡಿರುವ "ನಿತ್ಯಚರ್ಯೆ" ಎಂಬ ಹೆಸರಿನ ಆರೋಗ್ಯಶಾಸ್ತ್ರ ಆಚಾರಶಾಸ್ತ್ರಗಳಿಗನುಸಾರವಾಗಿ ಬೋಧಿಸುವ ಗ್ರಂಥವು ನಂದಿನಿಯಲ್ಲಿ ಪ್ರಕಟವಾಗುತ್ತಿರುವುದಲ್ಲದೆ, ಮತ್ತೊಂದಾದ ಪ್ರಾಚೀನಭಾರತಸ್ತ್ರೀಯರ ಚರಿತ್ರೆಯೂ ಇಷ್ಟರಲ್ಲಿ ನಂದಿನಿಯಲ್ಲಿ ಪ್ರಕಟವಾಗುವುದೆಂಬ ನಿರೀಕ್ಷೆಯಿರುವುದು. ಇವರ ಗ್ರಂಥಗಳ ವಾಚನದಿಂದಾಗುವ ಪ್ರಯೋಜನವನ್ನು

ವಾಚಕರೇ ಊಹಿಸಿ ತಿಳಿಯಬೇಕಲ್ಲದೆ ನಾವು ಹೇಳುವುದರಿಂದ ಜನರಿಗೆ ಅಷ್ಟು ಮಂದಟ್ಟಾಗಲಾರದುದರಿಂದ ಆ ವಿಷಯವಾಗಿ ನಾವು ಏನನ್ನೂ ಹೇಳಲಾರೆವು. ಮುಖ್ಯವಾಗಿ, ಗ್ರಂಥಕರ್ತರ ಉದ್ದೇಶವನ್ನೂ ಗ್ರಂಥದ ಸ್ವಾರಸ್ಯ ಪ್ರಯೋಜನಗಳನ್ನೂ ಸಾವಧಾನದಿಂದ ಸಮಾಲೋಚಿಸಬೇಕೆಂದೂ, ನಂದಿನಿ-ಹಿತೈಷಿಣಿಯ ಹೆಸರನ್ನು ಹೇಳಿದ ಮಾತ್ರಕ್ಕೇ ಪುಸ್ತಕವನ್ನು ನೋಡದೆಯೇ ಬಿಸುಡಬಾರದೆಂದೂ ನಂದಿನಿ-ಸತೀಹಿತೈಷಿಣಿಯಲ್ಲಿ ಪ್ರಕಟವಾಗುವ ಗ್ರಂಥಗಳನ್ನೇ ವಿಮರ್ಶೆ ಮಾಡಲು ಕಂಕಣಬದ್ಧರಾಗಿರುವ ಪಂಡಿತ ಮಹಾಶಯರಲ್ಲಿ ಸವಿನಯವಾಗಿ ನಿವೇದಿಸುವೆವು.

ಈ ಗ್ರಂಥದ ಪ್ರತಿಪದ್ಯಗಳ ಕ್ಲಿಷ್ಟಪದಗಳಿಗೂ ಟಿಪ್ಪಣಿಗಳನ್ನು ಕೊಡಬೇಕೆಂಬ ಅಭಿಲಾಷೆಯಿದ್ದರೂ ಸದ್ಯಕ್ಕೆ ಅದು ಆಗದಿರುವುದರಿಂದ ಮುಂದಿನ ಮುದ್ರಣದಲ್ಲಿ ಸೇರಿಸುವುದಾಗಿ ಯೋಚಿಸಿರುವೆವು. ಪದ್ಯಗಳಲ್ಲಿ ಬಿದ್ದಿರಬಹುದಾದ ಮುದ್ರಣ ದೋಷಗಳಿಗೆ ಮಾತ್ರವೇ ಶುದ್ಧಿ ಪತ್ರವನ್ನು ಕೊಟ್ಟಿರುವೆವು, ಉಳಿದ ಅಲಂಕಾರಭಾಗಕ್ಕೆ ಶುದ್ಧಿಪತ್ರವನ್ನು ಕೊಡಲು ಕಾಲಾವಕಾಶವಾಗಲಿಲ್ಲವಾಗಿ ಕೊಡಲಿಲ್ಲ. ಇದಕ್ಕಾಗಿ ನಮ್ಮ ಸೋದರೀ-ಸೋದರರಲ್ಲಿ ಪ್ರಾರ್ಥಿಸುತ್ತ ಇಷ್ಟಕ್ಕೆ ವಿರಮಿಸುವೆವು.

ಸತೀಹಿತೈಷಿಣಿ ಮಾತೃಮಂದಿರಂ
ನಂಜನಗೂಡು
ಸಿದ್ಧಾರ್ಥಿ ಸಂ|| ಜ್ಯೇಷ್ಠ ಶು||
ತೃತೀಯ ಭಾನುವಾರ (1-6-1919)

ಇತಿ
ನಿರಂತರ ಶ್ರೇಯಃಕಾಂಕ್ಷಿಣಿ
ಧರ್ಮಭಗಿನಿ ಸಂ. ನಂದಿನಿ

# ಶುದ್ಧಾಶುದ್ಧಪತ್ರಿಕೆ.

ಭ್ರಮಪ್ರಮಾದಬಹುಲಂ ಪುಸ್ತಕಂ ಜೀವನಂಚಮೇ ।
ಕ್ಷಂತವ್ಯಂ ಕೃತಿಭಿಸ್ಸದ್ಭಿ ಶ್ರೀಶೇನ ಜ್ಞಾನಮೂರ್ತಿನಾ ॥

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧ | ೧೨ | ಕೃತಿಗ – | ಕೃತಿಗ ! |
| ,, | ೧೪ | ಭಾ | ಭಾ । |
| ೨ | ೨ | ಹರಿದ್ರಾಪಿಂ | ಹರಿದ್ರಾಪಿಂ । |
| ,, | ೫ | ನೃಹರಿನಿನಗಿ | ನೃಹರಿ ನಿನಗಿ |
| ,, | ೯ | ಯನಿಭ ಕ್ರೋ | ಯನಿಭಕ್ರೋ |
| ,, | ೧೪ | ಇದುಪುಣ್ಯಾಂ | ಇದು ಪುಣ್ಯಾಂ |
| ೩ | ೧ | ದೊರೆವುದ ವಿ | ದೊರೆವ ವಿ |
| ,, | ೩ | ಮಹಿ ಮೃಗಾ | ಮಹಿ ಮೃಗಾ |
| ,, | ೪ | ಗಹ್ವರ ಚಯ | ಗಹ್ವರಚಯ |
| ,, | ,, | ನಕ್ರಾನ್ವಿತ ಭೀ । | ನಕ್ರಾನ್ವಿತ ಭೀ ॥ |
| ,, | ೧೩ | ಪುರುಷಸಂ | ಪುರುಷಂ |
| ,, | ,, | ಪಾಲ್ಗಡಲೋ | ಪಾಲ್ಗಡಲೊ |
| ,, | ೨೩ | ಕೋಟಿಗಳ್ಜಸ | ಕೋಟಿಗಳ್ಜಸ |
| ,, | ೨೬ | ಅನನಯ | ಅನನ್ವಯ |
| ೪ | ೪ | ನೃಹರಿ ಕೀರ್ತನೆತುಲ್ಯಂ | ನೃಹರಿಕೀರ್ತನೆ ತುಲ್ಯಂ |
| ,, | ೫ | ಅಧಿಕೃತಿಯುಕ್ಕರ್ಗಳಿ | ಅಧಿಕೃತದುಕ್ಕರ್ಗಳಿ |
| ,, | ೨೬ | ಪಿರಿವೆಂ | ಪಿರಿದೆಂ |
| ೫ | ೧೦ | ಪೆರ್ಚಿನದು | ಪೆರ್ಚ್ಚಿನದು |
| ,, | ೧೭ | ನಲನೆಂ । | ನಲನೆನು । |

| ಪುಟ. | ಪಂಕ್ತಿ | ಅಶುದ್ಧ. | ಶುದ್ಧ |
|---|---|---|---|
| ,, | ೧೭ | ದು, ಸುರ | ತೆ ಸುರ |
| ೫ | ೧೮ | ಕತೃ್ಯವೆಂದು | ಕತೃ್ಯವೆನುತೆ |
| ,, | ,, | ಮುಕ್ತಿಡನೆಂಸುಂ ‖ | ಮುಕ್ತಿದನೆನುತುಂ ‖ |
| ,, | ೧೯ | ಷ್ಟದನೆಂ । | ಷ್ಟದನೆನು । |
| ,, | ೨೦ | ದು ಸುಭ | ತೆ ಸುಭ |
| ,, | ೨೪ | ‖ ೨೫ ‖ | ‖ ೨೫ ‖ 6 |
| ೬ | ೩ | ಮೃಗ ವಕ್ತ್ರಂ | ಮೃಗವಕ್ತ್ರಂ |
| ,, | ೪ | ದುದೇಹಳೀ ವ | ದು ದೇಹಳೀವ |
| ,, | ೯ | ವಕ್ಕಿಗಳ್ಗದ | ವಕ್ಕಿಗಳ್ಕಮ |
| ,, | ೧೪ | ಅಮೃತ । | ಅಮೃತ ‖ |
| ,, | ೧೫ | ರಿಂದ ಸನ | ರಿಂದಂ ಸನ । |
| ,, | ೨೧ | ನೃಹರಿ ಭಕ್ತಾವನದಿಂ | ನೃಹರಿಭಕ್ತಾವನದಾ |
| ೭ | ೩ | ವುದುತೃಪ್ತಿಯಂನೃ | ವುದು ನೃ |
| ,, | ,, | ನಾವಮೇ | ನಾಮಮೇ |
| ,, | ೭ | ಪೆಡೆಯಂ | ಪೊಡೆಯಂ |
| ,, | ೧೧ | ದಿದ ವಿದ್ಯೆಕು | ದಿದವಿದ್ಯೆ ಕು |
| ,, | ೧೪ | ಉರಿನಿಲ್ಗು ಮೌ | ಉರಿ ನಿಲ್ಗುಮೌ |
| ,, | ೧೮ | ಕೃತಿನೀಂ | ಕೃತಿ ನೀಂ |
| ,, | ೧೯ | ನಖಾವಾ್ರ | ನಖಾ ಪಾ್ರ |
| ,, | ೨೧ | ನೃಹರಿಯಲಿ | ನೃಹರಿಯು ಯೇ । |
| ,, | ೨೩ | ನಿದ್ರು್ಯತಾ | ನಿದ್ರು್ಯ ತಾ |
| ,, | ೨೫ | ಸಂಭವದಾ್ರಂ | ಸಂಭವದಾ್ಭ್ರಂ |
| ೮ | ೩ | "೧೨. ಉತ್ಪ್ರೇಕ್ಷೆ"- | ಇದನ್ನು ೭ನೆಯ ಪಂಕ್ತಿಯಾಗಿ ಓದಿಕೊಳ್ಳುವುದು. |
| , | ೯ | ಳಿಡುತಿಪೇರ್ದೆ | ಳಿಡುತಿಪೇರ್ದೆ |
| ,, | ೧೧ | ಪರ್ಬ್ಬೆಕಳ್ತೆಲೆನಿ | ಪರ್ಬ್ಬೆ ಕಳ್ತಲೆ ನಿ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ,, | ೧೨ | ನೆರೆಯುಕ್ಕೆ | ನೆರವಕ್ಕೆ |
| ,, | ೨೩ | ಪ ಹರಿಪಂ | ಪಹರಿಪಂ |
| ,, | ,, | \|\|೪೧\|\| | \|\|೪೧\|\| 6. |
| ೯ | ೨೬ | ಆಸಿದ | ಆಸಿದ್ಧ |
| ೧೦ | ೧೬ | ವನೇಜ್ಜೈನಿನ | ವನೇಜ್ಜೈ ನಿನ |
| ,, | ೨೭ | ಪರಿಗುಂಮ | ಪರಿಗುಂ ಮ |
| ೧೧ | ೧೨ | \|\|೫೫\|\| | \|\|೫೫\|\| 3 |
| ,, | ೧೪ | ಶಾಂತಿ ಸುಖ | ಶಾಂತಿಸುಖ |
| ೧೨ | ೧೪ | \|\|೬೧\|\| | \|\|೬೧\|\| 3 |
| ,, | ೧೮ | \|\|೬೨\|\| | \|\|೬೨\|\| 4 |
| ,, | ೨೪ | ಜರ...ಪತಿಜಂ\|\| | ಜರರಕ್ಷಾಃ ಪತಿಜಖೇದ ಕಾದುದು ನಿಲಯಂ\|\| |
| ,, | ೨೬ | ಪಿಂಡಿಗೆ...ಮುಂ\|\| | ಪಿಂಡಿಗಧೋಭುವನಮು ಮಾದುದು ನಿಲಯುಂ\|\| |
| ,, | ,, | \|\|೬೪\|\| | \|\|೬೪\|\| |
| ೧೩ | ೧೯ | ನೆಲಸಿಕ್ಕುಂ | ನೆಲಸಿಕ್ಕರ್ಂ\|\| |
| ,, | ೨೪ | ಕಂರನ್ನ | ಕಂ ರನ್ನ |
| ೧೪ | ೧ | ಕಹ ಕೀರ್ತಿ | ಕಹಕೀರ್ತಿ |
| ೧೫ | ೧೨ | \|\|೭೭\|\| 3 | \|\|೭೭\|\| |
| ,, | ೧೭ | \|\|೭೮\|\| 4 | \|\|೭೮\|\| 3 |
| ,, | ೨೧ | \|\|೭೯\|\| 5 | \|\|೭೯\|\| 4 |
| ,, | ೨೪ | ಬಿದಿರ್ಚ | ಬಿದಿರ್ಚಿ |
| ೧೫ | ೨೬ | \|\| ೮೦ \|\|6 | \|\|೮೦\|\|5 |
| ,, | ೨೮ | ೩. ದ್ವಿತೀಯ....ಸಾ– | ೩.ದ್ವಿತೀಯಬೇದ.೬ ಸಾ |
| ೧೬ | ೮ | ಸಹಸ್ರ ಕರದಿಂ | ಸಹಸ್ರಕರದಿಂ |
| ,, | ೨೦ | ಗೆ ವ ಮಾತ್ಮ | ಗೆವುಮಾತ್ಮ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | ೨೧ | ನಿಲೆಪ್ರ | ನಿಲೆ ಪ್ರ |
| ೧೭ | ೧ | ಉದಯಿಸೆ | ಉದಯಿಸಿ |
| ,, | ೮ | ಕೇ । | ಕೇ ॥ |
| ,, | ೨೩ | ನಾರಾಯಣ ರೂ | ನಾರಾಯಣರೂ |
| ೧೮ | ೬ | ಪರಿವಕಡಂ | ಪರಿವ ಕಡಂ |
| ೧೮ | ೨೨ | ನಾಂತುತುವು | ನಾಂತುವು. |
| ,, | ೨೮ | ದಿಜ್ಮತ್ರ | ದಿಜ್ಮಾತ್ರ |
| ೧೯ | ೬ | ॥ ೯೭ ॥ | ॥ ೯೭ ॥I |
| ,, | ೨೯ | ವಿಷಯುಗಗ | ವಿಷಯುಗತ |
| ೨೦ | ೧೫ | ಯೊಳೆರು | ಯೊಳೇ ರು |
| ,, | ೧೬ | ತ್ರತ್ವಂ | ತತ್ತ್ವಂ |
| ,, | ೧೮ | ನಿನ್ನಿನಾನರ | ನಿನ್ನಿನಾ ನರ |
| ,, | ೧೯ | ಹರಿನೀ | ಹರಿ ನೀ |
| ,, | ೨೬ | ರುದಯಿಪ್ಪರ್ಪಗಳ್ | ರುದಯಿಪ್ಪಾಗಳ್ |
| ೨೧ | ೩ | ನೊಳ ಮಿತ್ರ | ದೊಳಮಿತ್ರ |
| ,, | ೨೩ | ರ್ಷದೆ | ರ್ಷದೆ |
| ,, | ೨೫ | ದ್ವಿತಿಯ | ದ್ವಿತೀಯ |
| ೨೨ | ೮ | ಅನುಕಂಪಿಸ್ಯ. ..ಯು । | ಅನುಕಂಪಿಸ್ಯಹರಿನನ್ನಿಯ। |
| ೨೩ | ೧೪ | ನಿನತುತಾದ್ರಾ | ನಿನತು ತಾದ್ರಾ |
| ೨೪ | ೫ | ತನ್ನತುವಧೆ | ತನ್ನತು ವಧೆ |
| ,, | ೭ | ತ್ತರಗಲ್ | ತ್ತರಸಲ್ |
| ,, | ೮ | ಅರಿವುದುಬ | ಅರಿವುದು ಬ |
| ,, | ೧೦ | ನಿನಗೆಮ್ಯ | ನಿನಗೆ ಮ್ಯ |
| ,, | ೧೫ | ನುಡಿಮೂಢಂ | ನುಡಿ ಮೂಢಂ |
| ,, | ೧೭ | ಲಭ್ಧಿಪರಾ | ಲಭ್ಧಿ ಪರಾ |
| ,, | ೨೦ | ಕ್ಲೃಪ್ತಿ | ಕ್ಲೃಪ್ತಿ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೨೫ | ೯ | ಪ್ಪದ ಕೀರ್ತಿ | ಪ್ಪದಕೀರ್ತಿ |
| ೨೬ | ೬ | ಮಹಿಮೆ ತೀ | ಮಹಿಮೆತೀ |
| ೨೬ | ೧೦ | ದೊಡನೆರೆಯವ್ವತಾಂ | ದೊಡಂ ನೆರೆಯವು ತಾಂ |
| ,, | ೧೩ | ಯುಮಿ ‖ | ಯುಮಿಂ ‖ |
| ,, | ೧೭ | ಶ್ರದ್ಧಾಮಂತಃ | ಶ್ರದ್ಧಾನ್ವಿತಮಂತಃ, |
| ೨೭ | ೧೭ | ನೆರೆಯಿತ್ತು | ಕರುಣಿಸು |
| ,, | ೨೧ | ಅರಿದೇನೋಗ | ಅರಿದೇನೋಯೋಗ |
| ೨೮ | ೧೨ | ಮ್ಮೆಮೆಯೋಜ | ಮ್ಮೆಮೆ ಯೋಜ |
| ೨೮ | ೧೫ | ಕರದಿಂಪಿರಿ | ಕರದಿಂ ಪಿರಿ |
| ೨೯ | ೮ | ಮಣಿಸಶ್ರಿ | ಮಣಿ ಸಶ್ರಿ |
| ,, | ೧೩ | ವದರಿಂತಿರುಕ | ವದರ್ಿಂ ತಿರುಕ |
| ೩೦ | ೧೫ | ನೆಲಸಿದ್ದುರ್ಕೀಲ | ನೆಲಸಿದ್ಧುರ್ ಕೀಲ |
| ,, | ೨೦ | ನಿರ್ದೇಶಂಮ | ನಿರ್ದೇಶಂ ಮ |
| ,, | ೨೧ | ತ್ರಿದುತಾಂ | ತ್ರಿದು ತಾಂ |
| ,, | ೨೨ | ಬುದುಭೇದಂ | ಬುದು ಭೇದಂ |
| ೩೧ | ೫ | ಪದಂ ಸಾಚ್ಛ್ರ್ಯ | ಪದಂಸಾಚ್ಛ್ರ್ಯ |
| ೩೨ | ೧೦ | ನೃಹರಿ ತತ್ತ್ವ | ನೃಹರಿತತ್ತ್ವ |
| ,, | ೨೫ | ತರರಕ್ತದು | ತರರಕ್ತದ |
| ೩೩ | ೧೯ | ರಮೆಯಾತೀವ್ರ | ರಮೆಯಾ ತೀವ್ರ |
| ,, | ೨೪ | ವಿರುದ್ಗಯೋ | ವಿರುದ್ಧಯೋ |
| ೩೪ | ೮ | ನೃಹರಿ ದ್ಯ | ನೃಹರಿದ್ಯ । |
| ೩೫ | ೩ | ಗಣೆಸದಾ ನೃ | ಗಣೆಸದಾನೃ |
| ,, ಗಟ | ೧೬ | ಭಕ್ತಂ ತಿಳಿವಂ | ಭಕ್ತನೆನಿಪ್ಪಯ್ |
| ೩೬ | ೧೨ | ಲಭ್ರ ಪುಷ್ಪಂ | ಲಭ್ರಪುಷ್ಪಂ |
| ,, | ೨೧ | ದನೆನ್ನಹ | ದನೆ ನೃಹ |
| ೩೯ | ೧೩ | ಸದನ ಭಿಜ್ಞ | ಸದನಭಿಜ್ಞ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೪೧ | ೧೪ | ಪಸರಿಸಿಸಿಡಿದಂದಾ | ಪಸರಿಸಿ ಸಿಡಿದಂದಾ |
| ,, | ೧೫ | ಕಾಣದು ಭಜಯಂ | ಕಾಣದುಭಜಯಂ |
| ೪೨ | ೨೧ | ಅವತಿರಿಸೆ | ಅವತರಿಸೆ |
| ,, | ೨೨ | ಖೆದಕಾ | ಖೇದಕಾ |
| ೪೪ | ೮ | ಕಳ್ತಿಯಡಿ | ಕಳ್ತಿಹುಡಿ |
| ,, | ೨೧ | ಹರಿಯರಿ ಯಸಮರ್ಥ | ಹರಿಯರಿಯಸಮರ್ಥ |
| ೪೫ | ೧೦ | ನಟ್ಟದಿಟ್ಟಿ | ನಟ್ಟ ದಿಟ್ಟಿ |
| ೪೬ | ೭ | ಪ್ರಕರ್ಪಾಂ | ಪ್ರಕರ್ಷಾಂ |
| ೪೭ | ೧೭ | ತನನೆರಡುಂ | ತನುವೆರಡುಂ |
| ೪೮ | ೨ | ಲೆನಗಿ ದಾಶ್ಚರ್ಯ | ಲೆನಗಿದಾಶ್ಚರ್ಯ |
| ,, | ೭ | ಅನುರಿಯುರಂ | ಅಸುರಿಯುರಂ |
| ,, | ೨೦ | ಚಕೀರ್ಪ | ಚಿಕೀರ್ಷ |
| ,, | ೨೩ | ವಪ್ರವೊಂದೇ | ವಪುವೊಂದೇ |
| ,, | ,, | ಕೃಗೆಯಿಂ | ಕೃಪೆಯಿಂ |
| ,, | ೨೫ | ಸೇ ಜನಕಂ | ಸೇಜನಕಂ |
| ೪೧ | ೮ | ಸಿರೆಯು ಸೌಮ್ಯಂ | ಸಿರೆಯುಂ ಸೌಮ್ಯ |
| ,, | ೧೪ | ನುತಿಘುಷ್ಪಂ | ನುತಿ ಘುಷ್ಪಂ |
| ೪೨ | ೧೩ | ರತಮುಕ್ತಿ | ಋತಮುಕ್ತಿ |
| ,, | ೨೫ | ಮಪ್ಪೊಡಂ ವನೆ | ಮಪ್ಪೊಡಂ ಶಿವನೆ |
| ,, | ೨೭ | ಮಭೆದ ದುಕ್ತಿ | ಮಭೇದದುಕ್ತಿ |
| ೪೩ | ೨೬ | ಜನಿರ್ಪ....ಮಿಪ್ಪು | ಜನಿಯಿಪ್ಪರ್...ಮಿಪ್ಪುರ್ |
| ೪೪ | ೨೫ | ಸಜ್ಜನರ | ಸಜ್ಜನರ |
| ,, | ೨೭ | ಮಂಜು ಮಂಜೀರ | ಮಂಜುಮಂಜೀರ |
| ೪೫ | ೭ | ನರಹರಿಯಿಂದೆ ತಮೋ | ನರಹರಿಯಿಂ ಲೂನತಮೋ |
| ,, | ೮ | ಗಳಲೂನ | ಗಳ ಕಾಳ |
| ,, | ೧೩ | ಮಹಾ ವೊಹನ್ನುಂ | ಮಹಾವೋಹಮಂ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | ೧೫ | ಲ್ಯಕಮೃತ ತಟಾಕಂ | ಲ್ಯಕಮೃತತಟಾಕಂ |
| ,, | ೧೬ | ಹೃದ್ರೋಗ ಹರ | ಹೃದ್ರೋಗಹರ |
| ,, | ೨೩ | ನಪವರ್ಗಸುಮಾರ್ಗ | ನವ್ಯತತ್ವಸುತತ್ತ್ವ |
| ೪೬ | ೬ | ಸಮಸಂ | ಸಮಸ್ತಂ |
| ,, | ೧೪ | ನ್ನೊಳೆಯು | ನ್ನೊಳೆಯೆ |

೪೮ನೆಯ ಪುಟದಮುಂದೆ ೪೯ಕ್ಕೆ ಬದಲಾಗಿ ೪೧ ಎಂದು ಪುಟಸಂಖ್ಯೆ ತಪ್ಪಾಗಿ ಮುದ್ರಣವಾಗಿದೆ. ವಾಚಕರು ದಯೆಯಿಟ್ಟು ೪೮ರಿಂದ ಮುಂದಿನ ಪುಟಗಳನ್ನು ಕ್ರಮವಾಗಿ ೪೯—೫೪ ಪುಟಗಳಂತೆ ಭಾವಿಸಿ ಓದಬೇಕಾಗಿ ಸೂಚನೆ.

## ಅಲಂಕಾರ ಭಾಗ

| | | | |
|---|---|---|---|
| ೨ | ೬ | ಅರ್ಥ | ಅರ್ಥ |
| ,, | ೨೪ | ಗಳಲ್ಲೆಲಾ | ಗಳಲ್ಲೆಲ್ಲಾ |
| ೩ | ೧೪ | ಲುಪ್ತೋಪಮೆ | ಲ.ಪ್ತೋಪಮೆ |
| ,, | ೧೬ | ಲುಪ್ತೋಪಮೆ | ಲುಪ್ತೋಪಮೆ |
| ,, | ೨೫ | ಅಷ್ಟಕ್ಕೇ ಲಕ್ಷ | ಅಷ್ಟಕ್ಕೇ ಲಕ್ಷ್ಯ |
| ೫ | ೨೩ | ಪಧ್ಯ | ಪದ್ಯ |
| ೬ | ೧೧ | ವತ್ತೊಬ್ಬನಿಗೆ | ಮತ್ತೊಬ್ಬನಿಗೆ |
| ,, | ೨೧ | ಭೇಕಾಪಹ್ನುತೀ | ಭೇಕಾಪಹ್ನುತಿ |
| ೮ | ೨೦ | ಗಿದ್ದರೆ! ಚಪಲಾತಿಶಯೋಕ್ತಿಯನಿಸುವುದ; | ಗಿದ್ದರೆ ಚಪಲಾತಿಶಯೋಕ್ತಿಯೆನಿಸುವುದು; |
| ೯ | ೧೯ | ಪದಾರ್ಥಾF | ಪದಾರ್ಥಾ |
| ೧೦ | ೯ | ಡಾವಾಗಲೀ | ದಾಗಲೀ |
| ೧೧ | ೧೨ | ಸರಿಸ್ಫೂರ್ತಿ | ಪರಿಸ್ಫೂರ್ತಿ |
| ೧೨ | ೫ | ತೋರಿರಬರು | ತೋರಬರು |
| ,, | ೮ | ಆಗಬ ಹುದು | ಆಗಬಹುದು |
| ೧೩ | ೮ | ಪಸ್ತುತಾಂಕುರ | ಪ್ರಸ್ತುತಾಂಕುರ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | ೧೩ | ನಿಬಂಧನೆಯೇ | ನಿಬಂಧನೆಯೇ |
| ,, | ೧೩-೧೪ | ಸಂಬಂಧಾನಂತರ | ಸಂಬಂಧಾಂತನ |
| ,, | ೨೯ | ವ್ಯಾಜಬದ್ದ | ವ್ಯಾಜಬದ್ಧ |
| ೧೪ | ೯ | ೧೦೪ | ೧೦೩ |
| ,, | ೧೨ | ೧೦೩ | ೧೦೪ |
| ೧೫ | ೨೬ | ವರ್ಣೀ | ವರ್ಣಿತ |
| ೧೭ | ೧ | ಇಲ್ಲಿ-(ಲ) ಆಶಿಷ್ಟೆ(ಷ್ಟ)ರೂ ಪಾಸವಾಪ್ತಿಯೂ ಬಂದು ಭೇದವು ಅ ದಾ-ಪ. (೨೨) ಎಂಬುದನ್ನು ಸೇರಿಸಿಕೊಂಡು ಓದಬೇಕು | |
| ೧೮ | ೨೩+೨೪ | ಉತ್ತರೋತ್ತರಣಕ್ಕೆ ಕಾಣ | ಉತ್ತರೋತ್ತರಕ್ಕೆ ಕಾರಣ |
| ೨೦ | ೧೫ | ಪರಸ್ಪಂ | ಪರಸ್ಪರ |
| ೨೧ | ೧೫ | ಕಾವ್ಯಾರ್ಥಾ ಪ್ರತ್ಯಯಂ | ಕಾವ್ಯಾರ್ಥ ಪ್ರತ್ಯಯಂ |
| ,, | ೨೦ | (೧) ವಾ ಕ್ಯಾರ್ಥ | (೧) ವಾಕ್ಯಾರ್ಥ |
| ೨೩ | ೧೦ | ವಾಗಿದರೂ | ವಾಗಿದ್ದರೂ |
| ,, | ೧೭ | ವಾಗಲು | ವಾಗಿರಲು |
| ೨೪ | ೨೪ | ಇರಬಹುದ | ಇರಬಹುದು |
| ೨೫ | ೧ | ವಾಗಿದರೆ | ವಾಗಿದ್ದರೆ |
| ,, | ೨೪+೨೫ | ವೈಧರ್ಮ್ಯವು ಸ್ಫೂರ್ತಿ | ವೈಧರ್ಮ್ಯವು ಸ್ಫೂರ್ತಿ |
| ೨೫ | ೭ | ಲೋಕೋಕ್ತ್ಯ | ಲೋಕೋಕ್ತ್ಯ |
| ೨೭ | ೯ | ವಿಷಯವಾಗಿಯೋಜನೆಯ | ವಿಷಯಕವಾಗಿ ಯೋಜನೆಯು |
| ೨೮ | ೭+೭ | ಜಾತ | ಜ್ಞಾತ |
| ,, | ೧೦ | ಜ್ಞಾನಾರ್ಥ | ಜ್ಞಾತಾರ್ಥ |
| ,, | ೨೫ | 'ಭಾವವು' — ಇದರ ಮುಂದೆ — "ಆ ಭಾವವು ಎಲ್ಲಿ ಇನ್ನೊಂದಕ್ಕೆ ಅಂಗವೋ ಅಲ್ಲಿ ಪ್ರೇಯೋಲಂಕಾರವು." ಎಂದಿಷ್ಟನ್ನು ಸೇರಿಸಿಕೊಂಡು ಓದಬೇಕು. | |
| ೨೯ | ೧೨+೧೩ | ಶೃಂಗಾರರವು | ಶೃಂಗಾರರಸವು |
| , | ೧೮ | ನರಹರಿ ರತಿಭಾವಕ್ಕೆ | ನರಹರಿ ವಿಷಯರತಿಭಾವಕ್ಕೆ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | ೨೧ | ತದ್ವಿಯದ್ವಿಪ | ತದ್ವಿಷಯದ್ವಿಷ |
| ,, | ೨೬ | ಪ. ೨೫೨ | ಪ. ೨೫೩. |
| ೩೦ | ೮ | ಉಪವಾಸ | ಉಪಮಾನ |
| ,, | ೧೨ | ವದ್ಯ | ಪದ್ಯ |
| ,, | ೧೪ | ವೃದಾಜ ಮಾತಾಪಿತತಾ | ವೃದ್ಧಾಜ ಮಾತಾಪಿತರಾ |
| ೩೧ | ೧೩ | ಸಂಸೃಷ್ಟಿ ಎಲ್ಲಿ ಸಂಸೃಷ್ಟಿ | ಅಲ್ಲಿ ಸಂಸೃಷ್ಟಿ; |
| ,, | ೧೮ | ಯ ಮಕಗಳೆ | ಯಮಕಗಳ |
| ,, | ೨೧ | ಶಬಾಲಂಕಾರಾ | ಶಬ್ದಾ |
| ,, | ೨೪ | ಸಂದೇಹಕರ | ಸಂದೇ |

[ವಿ. ವಿ. — ಸುಮಾರು ಒಂದೂವರೆವರ್ಷಗಳಿಂದುಂಟಾಗಿರುವ ಅನೇಕಾನೇಕ ಅನಾನುಕೂಲತೆಗಳಿಂದ ಮುದ್ರಣಕಾರ್ಯವು ಇಷ್ಟು ದೀರ್ಘಕಾಲವನ್ನು ಹಿಡಿದರೂ ಮುದ್ರಣದೋಷಗಳು ಬಹುವಾಗಿರುವುದಕ್ಕೆ ವಿಷಾದಿಸುವೆವು. ವಾಚಕರು ದಯೆಯಿಟ್ಟು ಶುದ್ಧಾಶುದ್ಧಪತ್ರಿಕೆಯನ್ನೊಮ್ಮೆ ನೋಡಿ ಅದರಂತೆ ಸರಿಪಡಿಸಿಕೊಂಡು ಓದಬೇಕೆಂದೂ ಅತ್ಯುತ್ತಮವಾದೀ ಗ್ರಂಥವು ಪ್ರಥಮ ಮುದ್ರಣದಲ್ಲಿ ಸ್ವಲ್ಪ ಪ್ರತಿಗಳೇ ಆಗಿರುವುದರಿಂದ ಕ್ಷಿಪ್ರದಲ್ಲಿಯೇ ದ್ವಿತೀಯ ಮುದ್ರಣದಿಂದ ಪರಿಷ್ಕೃತವಾಗಿ ಪ್ರಸಿದ್ಧಿಸಲ್ಪಡುವುದೆಂದೂ ಕೋರುವೆವು,
ಸಂ- ನಂ- ]

ಶ್ರೀಃ.

ಶ್ರಿಯೈನಮಃ

ಜಯ ಜಯ ಜಗದೀಶ ಲಕ್ಷ್ಮೀನೃಸಿಂಹ ಭಗವ‌ರ್

# ಲಕ್ಷ್ಮೀನೃಸಿಂಹ ಸ್ತೋತ್ರಂ

'ತ್ವದ್ದತ್ತವಾಚಾ ತವಕಿಂಕರೇಣ | ತ್ವತ್ಪ್ರೀತಿ ಕಾಮೇನ ಮಯಾಕೃತೇನ ||
ಸ್ತೋತ್ರೇಣ ಲಕ್ಷ್ಮೀ ನೃಹರೇ ಸವಿಷ್ಣುಃ| ಪ್ರೀತೋಭವತ್ವಂ ಕರುಣಾದ್ರ್ರದೃಷ್ಟಿಃ||'

|| ಕಂದ ||

ಜನನೀಜನಕಸೋದರ |
ರಿನಿಯವಿದ್ಯಾಯಶೋಧನಂಗಳ್ಪ್ರಭು ಮಿ ||
ತ್ರನುಮೆಲ್ಲಮಲ್ತೆ ನರಹರಿ |
ಯೆನಗೊಲವಿಂ ನೀನೆ ರಕ್ಷಿಸೆತ್ತಲುಮೆಂದುಂ ||೧||

ಅಧಿಕರಿಸುತಲಂಕೃತಿಗ—
ಳ್ಗುದಾಹರಿಸೆಸಿಂದು ಕುವಲಯಾನಂದಲಸ ||
ತ್ಪಥದಿಂ ನರಹರಿಯಂ ಭಾ
ರತಿ ವಹಿಸ ಪ್ರಸಾದಮಂ ಬಲಾತ್ಕರ್ಷಿಸೆಯುಂ ||೨||

೧. ಉಪಮೆ.

ನರಹರಿಯೆ ಸುಧಾರಸದಂ |
ತಿರೆ ಜಿಹ್ವೆಗೆ ನಿನತು ದಿವ್ಯನಾಮಂ ಮಧುರಂ ||
ಸ್ಫುರಿಕೆನಗೆ ಸಜ್ಜನಾಂತಃ |

ಕರಣದವೊಲ್ಪಿಮಲಮುಕ್ತಿ ನಿನ್ನಂ ಸ್ತುವಿಸಲ್ ||೩||[1]
ಒಲವೆನಿಕೊ ಹರಿದ್ರಾಪಿಂ
ಗಳಮಕ್ಷಿ ಕೃತಾಂತಘೋರದಂಷ್ಟ್ರಂ ಕರಜಂ ||
ಕುಲಿಶಸುತೀಕ್ಷ್ಣಂ ವಕ್ತ್ರಂ |
ಜ್ವಲನಾಭಂ ನೃಹರಿನಿನಗಿವೆಂದೊಡಮೆಮ್ಮೊಳ್ ||೪||[2]
ನಿನತನಲಸಮಜ್ಯೋತಿಗ |
ಮಿನತುಲ್ಯದ ಓಜಕೌರ್ವಸಮತೀಕ್ಷ್ಣತೆಗಾ ||
ಸ್ತನಿತಸಮಗರ್ಜನೆಗೆ ಪ್ರಲ |
ಯನಿಭ ಕ್ರೋಧಕ್ಕೆ ನೃಹರಿ ಸಾಸಿಮ್ಮೆ ತುಳಿಲ್ ||೫||[3]
ನರಹರಿಯ ಚರಿತಮಕ್ಕುಂ |
ಸರಸಗ್ರಾರ್ವೋದಮಕ್ಕು ಮಿಂಚರಮಕ್ಕುಂ ||
ಸುರುಚಿರವಸುವಕ್ಕುಗು ಮವೃ |
ತರಸಮುದಣ್ಪಕ್ಕುಮಂತೆ ಪ್ರಿಯತಮಮಕ್ಕುಂ ||೬||[4]
ಇದುಪುಣ್ಯಂ ಸೌಭಾಗ್ಯ |
ಪ್ರದಮಾಯುರ್ವರ್ಧನಂ ಸುಕಾಮದಮಾನಂ ||
ದದಮುಂಹಶ್ಯಮನಂ ಮು |
ಕ್ತಿದಮುಂ ನೃಹರಿಯ ಸುಧಾಯಮಾನಂ ನಾಮಂ ||೭||[5]
ಗುರುವಿಂ ಪ್ರಣಿಪಾತಾದ್ಯದೆ |
ದೊರೆದಪ್ಪ ರಹಸ್ಯತತ್ತ್ವದಿಂದಂತಿರೆವೊಲ್ ||
ಶರಧಿಯ ನಾಪಗೆವೊಗದೆ ನೃ |
ಹರಿಯ ಮಹಾವಿದ್ಯೆಯಂ ಪ್ರವೇಶಿಪೊಡಕ್ಕುಂ ||೮||
ಕರುಣಾದ್ರ್ರಚೇತನಾಗಿರೆ |
ಗುರು ಶಿಷ್ಯಂಗೊಗೆಯೆ ಭಕ್ತಿಯಾಗಳೆ ಅವನೊಳ್ ||

1 ಪೂರ್ಣೋಪಮೆ. 2 ವಾಚಕಲುಪ್ತೋಪಮೆ. 3 ಧರ್ಮಲುಪ್ತೋಪಮೆ. 4 ಧರ್ಮವಾಚಕಲುಪ್ತೋಪಮೆ. 5 ವಾಚಕೋಪಮೇಯಲುಪ್ತೋಪಮೆ. 6 ಉಪಮಾನಲುಪ್ತೋಪಮೆ.

ದೊರೆವುದ ವಿತರ್ಕಿತಮಾನರ |
ಹರಿತತ್ತ್ವಂ ದೊರೆದ ಕಾಕತಾಳೀಯಂ ತಾಂ ‖೯‖[1]
ಚರಿಸಿದೊಡಮುಹಿ ವೃಗಾಸ್ವಿತ |
ಗಿರಿಗಹ್ವರ ಚಯದೊಳಂತೆ ನಕ್ರಾಸ್ವಿತಧೀ |
ಕರತೀರ್ಥಸ್ನಾನದಿನುಂ |
ಹರಣಕೆ ಪೆಳರೊಂಪೆ ದೊರಗುವೇಂ ನೃಹರಿಸಮಂ ‖೧೧‖[2]
ಹರಿಣಾಕ್ಷಿಯರಾಶ್ಲೇಷಂ |
ಕರಭೋರುಗಳಂಗಮರ್ದನಂ ಕ್ರೀಡೆಯುಮಾ ‖
ಅರಸಂಚೆನಡೆಯರೊಡನೆ ನೃ |
ಹರಿಯಂಘ್ರಿಧ್ಯಾನಸುಖದ ಲೇಶಕ್ಕೆಣೆಯೇಂ ‖೧೧‖[3]

೨. ಅನನ್ವಯ.

ಸಿರಿಪೆಣ್ಣಿಂತೆಂತುಟು ನೀಂ |
ಪುರುಷಸಂ ಪಾಲ್ಗಡಲೋ ಇಂಬು ಭಕ್ತಹೃದಯವೋ ‖
ನರಹರಿ ಪರಾತ್ಪರಂ ನರ |
ಹರಿವೋಲೆಂಬೇನಸಾಧ್ಯಮರಿವೊಡೆ ತತ್ತ್ವಂ ‖೧೨‖ 4

೩. ಉಪಮೇಯೋಪಮೆ.

ಕರುಣೆಯಪಾರಂ ಮೈಮೆಯ |
ಪರಿಯಿಂ ಮೈಮೆವೊಲೆ ಕರುಣೆ ಸರ್ವಜ್ಞತೆಯಂ ‖
ತಿರೆವೊಲಧೀಶ್ವರತೆಯಧೀ |
ಶ್ವರತೆಯವೊಲ್ ನೃಹರಿ, ನಿನತು ಸರ್ವಜ್ಞತೆಯುಂ ‖೧೩‖[5]

೪. ಪ್ರತೀಪ.

ನರಹರಿಯೋಜಕ್ಕೆಣೆ ಭಾ |
ಸ್ಕರಕೋಟಿಗಳಿಂದುಕೋಟಿಗಳ್ಜಸಕೆಣೆ ಭೂ ‖
ಧರಕೋಟಿಗಳುನ್ನತಿಗೆಣೆ |

---

1 ವಾಚಕೋಪಮಾನಲುಪ್ತೋಪಮೆ. 2 ಧರ್ಮೋಪಮಾನಲುಪ್ತೋಪಮೆ
3 ಧರ್ಮೋಪಮಾನವಾಚಕಲುಪ್ತೋಪಮೆ. 4 ಅನನ್ವಯ 5 ಉಪಮೇಯೋಪಮೆ

ಧರಿತ್ರಿಯೂ ಕೋಟಿಗಳ್ ಕ್ಷಮಾಲವಕೆಣೆ ತಾಂ ||೧೪||[1]
ಸುಧೆಯೇಕೆ ನಿನಗೆ ಗರ್ವಂ |
ಮಧುರತೆಯೊಳ್ನಿನಗೆ ನೃಹರಿ ಕೀರ್ತನೆತುಲ್ಯಂ ||
ಅಧಿಕೃತಿಯುಮುರ್ಕೆಳಿಯಘಶಾಂ |
ತಿಧೃತಂ ನಿನ್ನಂತೆ ತಪಮೆ ನೃಹರಿಯ ಪೆಸರ್ಗಳ್ ||೧೫||[2]
ನರಹರಿಕೀರ್ತನೆಗಮದರ್ಕಂ |
ದೊರೆಗೆಯ್ದುಪರಾನಿಸರ್ಗರಸದನಭಿಜ್ಞರ್ ||
ಅರಿದೊಡೆ ನೃಹರಿ ಧ್ಯಾನದ |
ಪರಿಯಂ ದಿವಮೇತಕೇತರ್ಕಜ್ಜರಸೆಯುರುಂ ||೧೬||3

೫. ರೂಪಕ.

ಇದುಸಾಕ್ಷಾದಮೃತಮುದಾ |
ವುದನೀಂಟಿ ಸುರಸ್ವರಾಜ್ಯ ವೈಭವಮಂ ಪೂ ||
ರ್ವದವೊಲೆ ದೊರೆಕೊಂಡರೊ ಗೆ |
ಲ್ದು ದೈತ್ಯರಂ ನೃಹರಿಭವ್ಯನಾಮಂ ಮಧುರಂ ||೧೭||4
ದ್ರವರೂಪಂ ಬಿಟ್ಟಮೃತಂ |
ಸವಿವುದಿದಂ ಭಕ್ತಜನಮೆ ನೃಹರಿಯ ನಾಮಂ ||
ದಿವಗುಪ್ತತೆಯುಮನುಳಿದೊ |
ಪ್ಪುವಬೇರಮುದುರ್ಕಂಟೆ ನೃಹರಿ ನಾಮದಿನಿಳೆಯೊಳ್ ||೧೮||5
ದಿವಿಜದನುಜಸಾಧಾರಣ |
ಮವದಾತಾಮೃತಮಿದಲ್ತೆ ನೃಹರಿಯ ನಾಮಂ ||
ಸವಿಯಲ್ಬರ್ಕುಂ ವೃದ್ಧ |
ಶ್ರವನಂತಿರೆ ಬಲಿಗಮಂತೆ ಪ್ರಹ್ಲಾದಂಗಂ ||೧೯||6
ಅರಿವಿಧ್ವಂಸಕರಂ ಶ್ರೀ |
ಕರಮಂತಕಮೃತ್ಯು ನೃಹರಿನಾಮಾಮೃತಮಿಂ ||
ಪಿರಿವೆಂತಮೃತಂ ಕ್ಷೀರಾ |

1 ಪ್ರತೀಪ, 2 ಪ್ರತೀಪದ ಇನ್ನೆರಡುಭೇದಗಳು. 3 ಪ್ರತೀಪದ ಮತ್ತೊಂದುಭೇದ. 4 ಅನುಭಯಾಭೇದರೂಪಕ. 5 ನ್ಯೂನಾಭೇದರೂಪಕ. 6 ಅಧಿಕಾಭೇದರೂಪಕ

ಬ್ಧಿರಹಸ್ಸಂಬಂಧದಿಂದಿವಂಗಿಂಬದು ತಾಂ ‖ ೨೦‖[1]
ಇದಧನ್ವಂತರಿಯುರ್ಧೃತ |
ಮಿದನಿಂದುಸಹೋತ್ಥಮಿದಪಯೋನಿಧಿಜಾತಂ ‖
ಇದವೋಹಿನೀಕರಾತ್ತ |
ತ್ರಿದಿವೇಶಸುತುಷ್ಟಿ ನೃಹರಿಯಾಹ್ವಯದಮೃತಂ ‖೨೧‖[2]
ಜನಿ ಜಲಚರತತಿಗುಪಟಳ |
ಕನುಜತ್ವಂ ಬಿಸಕೆ ಕಲಹಕಾರಿತೆ ನವಸೌ ‖
ಮನಸತೆಯು ದಾಯಿಗರೊಳಿಂ |
ತೆನೆ ಸುಧೆ ಪೆರ್ಚಿನದು ನೃಹರಿನಾಮಸುಧಾಹ್ವಂ ‖೨೨‖[3]

## ೬. ಪರಿಣಾಮ.

ಇರದೆ ಹಿರಣ್ಯಕಶಿಪುವಂ |
ಕರಜಶಿತಾಯುಧದೆ ಸದೆದು ಪ್ರಹ್ಲಾದನನಾ ‖
ದರಹಸಿತನವಾತಪದೆ ನೃ |
ಹರಿ ವಿಶ್ವಾಸಿಸುತೆ ನೋಡಿದಂ ಕಣ್ಮಲರಿಂ ‖೨೩‖

## ೭. ಉಲ್ಲೇಖ.

ಅಸುರನ್ನೃಹರಿ ಯನಲಸೆಂ |
ದು, ಸುರಸ್ಥಿತಿಕರ್ತೃವೆಂದು ಮುಕ್ತಿದನೆಂದುಂ ‖
ಪ್ರಸೃತತಪರಭೀಷ್ಟದನೆಂ |
ದು ಸುಭಕ್ತರ್ ತಿಳಿಗು ಮಾರ್ತರಭಯದನೆನುತುಂ ‖೨೪‖[5]
ಜನಕಂ ಹಿತಕೃತಿಯೊಳ್ ಪಾ |
ಲನೆಯೊಳ್ತಾಯ್ ಧರಣಿ ಭಕ್ತರಾಗಃಕ್ಷಮೆಯೊಳ್ ‖
ಅನಲಂ ದುರಿತಧ್ವಂಸದೊ |
ಳನಿಷ್ಟಹತಿಯೊಳ್ಕೃತಾಂತನೀನೃಹರಿ ದಿಟಂ‖೨೫‖

---

1 ಅನುಭಯತಾದ್ರೂಪ್ಯ ರೂಪಕ. 2 ನ್ಯೂನತಾದ್ರೂಪ್ಯರೂಪಕ. 3 ಅಧಿಕತಾದ್ರೂಪ್ಯರೂಪಕ. 4 ಪರಿಣಾಮ. 5 ಉಲ್ಲೇಖ. 6 ಉಲ್ಲೇಖ. (ಮತ್ತೊಂದು ಪ್ರಕಾರ)

## ೮. ಸ್ಮೃತಿಮತ್.

ನರದೇಹಂ ಮೃಗ ವಕ್ತ್ರಂ |
ವರದತೆ ಸದೆಸಂದುದೇಹಳೀ ವಸತಿ ದಿನಾಂ ||
ತರಣದವತಾರವಿವುಗಳ್ |
ಸ್ಮರಯಿಪ್ಪುವಸರ್ವಸರ್ವಮೆಂಬಾತ್ಮನುದಂ ||೨೬||[1]

## ೯. ಭ್ರಾಂತಿಮತ್.

ನರಹರಿಯ ಯಶೋಧವಳಿಮ |
ಮುರೆ ಪಬ್ಬಿರೆ ಜೊನ್ನವಕ್ಕಿಗಳ್ಗದಪೂರ್ವಂ ||
ಹರಿಸಂ ಜನಿಸಿತು ಖೇದಂ |
ಪಿರಿದಾಯ್ತಭಿಸಾರಿಕಾಜನಕ್ಕೆ ತಮೋಘ್ನಂ ||೨೭||[2]

## ೧೦. ಸಂದೇಹ.

ಅಮರ್ದೆನ್ನುಂ ಸ್ಥಿರಜೀವಿ |
ತ್ವಮನಿತ್ತುದರಿಂ ಶುಕಾದಿಗಳ್ಗಾ ಅಮೃತ |
ತ್ವಮನಿತ್ತುದರಿಂದ ಸನ -
ಕಮುಖಗಾರ್ಗ್ಗನೃಹರಿನಾಮಮೆಂತೊ ಯಥಾರ್ಥಂ ||೨೮||[3]

## ೧೧. ಅಪಹ್ನುತಿ.

ಭೃಗುಪಾದತಾಡನವ್ರಣ |
ದೊಗೆದ ಕಿಣಂ ಶ್ರೀಮನೋಹರಾಂಕಮದಕ್ಕೀ ||
ವಗೆನುಡಿಗಳ್ ಚಿಂತೋಪ್ಸ್ಮದ |
ಪೊಗೆ ಸೇದ್ದಿಂತಾಯ್ತು ನೃಹರಿ ಭಕ್ತಾವನದಿಂ ||೨೯||
ಹರಿಯಲ್ಲಂ ತ್ರೀಕ್ಷಣನವ |
ತರಿಸಂ ಹರನೆಂತು ತರಣಿ ಸಂಧ್ಯಾರುಣದೊಳ್ ||
ಇರದಿಂದುವೊಳ್ ಪ್ರತಾಪಂ |
ಸುರವೈರಿದವಾಗ್ನಿ ನೃಹರಿಯಾಯ್ತು ಮಹೋಗ್ರಂ ||೩೦||[5]

---

1 ಸ್ಮೃತಿಮತ್. 2 ಭ್ರಾಂತಿಮತ್. 3 ಸಂದೇಹ. 4 ಶುದ್ಧಾಪಹ್ನುತಿ. 5 ಹೇತ್ವಪಹ್ನುತಿ.

ಸೊಡೆಯೆಂದುಮದಲ್ಲಂ ತೃ।
ಪ್ತಿದಮಿಾವುದು ತೃಪ್ತಿಯಂ ನೃಹರಿನಾವಮೇತೃಪ್ತಿಯದಂ ॥
ಆದನೀಂಟೆ ಸುರರ್ ಪಿಂಡುವ ।
ಬೀದುವನಿದಂ ಸವಿದರಂತುಟಾರೆಸಗಿದಪರ್ ? ॥೩೧॥[1]
ಜ್ವಲಿಸುತೆ ಭಕ್ತನೆ ಭೀಷಣ ।
ಮುಲಿಯುತ್ತೆ ವಿಕಾರರೂಪಿಯೊಂದರ ಪೆಜೆಯುಂ ॥
ಸುಲಿವುದಿದೇಂ ಭೂತಮೆ ಕೇಳ್ ।
ಸಲಪಲ್ ಪ್ರಹ್ಲಾದನಂ ನೃಹರಿ ಯಿಂತೊಗೆದಂ ॥೩೨॥[2]
ಇದಸಿದ್ಧಿ ವಿಭೂತಿ ಧರಿಸಿ ।
ದಿದ ವಿದ್ಯೈಕುಪಿಂಡಳಬ್ಧಿ ಮಗ್ನತೆಯುಳಿಗ ॥
ಜ್ಜದೊಳಿದಮುಸೋಸಿರೋಧಮು ।
ಳಿದು ಮುಕ್ತಭ್ರಾಂತಿಯುಂ ನೃಹರಿ ಪೊರೆಯೆನ್ನಂ ॥೩೩॥[3]
ಉರಿನಿಲ್ಕು ಮೌಗ್ರ್ಯಮಳಿಗುಂ ।
ಪರಿಗುಂ ಭೀಷಣತೆ ಯೋಗಮೋಡುಗುಮೊಲವಿಂ ॥
ಭರಿತಮೆಸಿಕುಮೆದೇ ನೃಹರಿಗೆ ।
ಸಿರಿ ಬರೆಯೇನಲ್ಲಮೆಮ್ಮನೋವುವೆಸಕದಿಂ ॥೩೪॥[4]
ಕೃತಿಸೀಂ ಪಂಚಾನನ ವಿ ।
ಸ್ತೃತಕೇಸರ ಘೋರದಂಷ್ಟ್ರ ತೀಕ್ಷ್ಣನಖಾಪ್ರಾ ॥
ವೃತರೋಮ ನಿರಂಕುಶಗತಿ ।
ಕತೆ ಸಿಂಗದಿಂದೆಂತುಟಲ್ಲಮಾನೃಹರಿಯಲಿ ॥೩೫॥[5]
ಒರೆಯುತೆ ಜಿಜ್ಞಾಸುವೆನು ।
ತ್ತ್ರೆ ರಹಸ್ಯಮನಿದ್ದ್ವತಾಪನೀಯಕ್ರಮದಿಂ ॥
ದರಿದಿವನಯೋಗ್ಯನೆಂದೀ ।

1 ಪರ್ಯಸ್ತಾಪಹ್ನುತಿ 2 ಸಂಭವದು ್ರಂತಾಪಹ್ನುತಿ. 3 ಕಲ್ಪಿತಭ್ರಾಂತಾಪಹ್ನುತಿ. 4 ಅರ್ಥಯೋಜನಾಭೇಕಾಪಹ್ನುತಿ. 5 ಶಬ್ದಯೋಜನಾ ಭೇಕಾಪಹ್ನುತಿ.

ಪರಿಯಿಂದೆನಗಾರೊ ಪೇಳ್ದರೆಂದಂ ಕನಸೊಳ್ ||೩೬||

## ೧೨. ಉತ್ಪ್ರೇಕ್ಷೆ

ನೃಹರಿಕಟಾಕ್ಷವ್ಯಾಜದಿ |
ನಿಹಪರಸೌಖ್ಯಂಗಳುಣ್ಮುವೀಸುಲಭಪಥಂ ||
ಸ್ವಹಿತಕ್ಕಿರೆಯುಂ ಭ್ರಮಿಸುತೆ |
ಬಹುಳತಪಃಕ್ಲೇಶಕೇಕೆ ಯತ್ನಿಕುವೊ ಜನಂ ||೩೭||

ಮಡಿಯೆ ಹಿರಣ್ಯಕಶಿಪು ಗೋ |
ಳಿಡುತಿರ್ಪೆದೆರ್ಬಡಿವ ಕೆಕ್ಕೆಯಂ ಕ್ಷಿತಿಗೆಯ್ವಾ |
ಮಡದಿಯರಳಲಗ್ಗಿಯ ಪೊರ |
ಪೊರವಡುವಾ ಪೊಗೆಯೆ ಪರ್ಬ್ಬೆಕಳ್ತಲೆನಿಸದಂ ||೩೮||[3]

ನೆರೆಯಕ್ಕೆನುತೌರ್ವಾದಿಗ |
ಳುರಿಯಿತ್ತುವೊ ನೃಹರಿಗಿತ್ತುದೋ ತೀಕ್ಷ್ಣತೆಯಂ ||
ಕರಜಕೆ ಪವಿ ಜವನಿತ್ತನೊ |
ಕರಾಳತೆಯನವನದಂಷ್ಟ್ರಕಸುರನ ವಧೆಯೊಳ್ ||೩೯||[4]

ಚರಿಸದು ಸಿಂಹಮುದೂರೋ |
ಳರಣ್ಯದೊಳ್ನರನುಮಂತುಟೆಂದೀರೊಡಲಂ ||
ಧರಿಸುತ್ತುಮೊಂದರೊಳೆ ಅವ |
ತರಿಸಿದನೀತೆರದೆ ನೃಹರಿ ಸರ್ವಗತಂ ದಲ್ ||೪೦||[5]

ಇರೆ ಲೋಕಸಾಕ್ಷಿಯೊಂ ನರ |
ಹರಿಗೆನ್ನಂತಕ್ಷಿಗಳಿವು ಮೆಂಕೆನ್ನುತೆ ಮ ||
ಚ್ಚರದಿನನಗ್ನೀಂದುಪ್ರಭೆ |
ಗುರೆ ಜಾಗ್ರದ್ಭೂತದಿನದೊಳಲ್ತೃಪ ಹರಿಪಂ ||೪೧||

---

1 ಅವಸ್ಥಾಭೇದಯೋಜನಾ ಛೇಕಾಪಹ್ನುತಿ. 2 ಕೈತವಾಪಹ್ನುತಿ. 3 ಉಕ್ತವಿಷಯಸ್ವರೂಪೋತ್ಪ್ರೇಕ್ಷೆ. 4 ಅನುಕ್ತವಿಷಯಸ್ವರೂಪೋತ್ಪ್ರೇಕ್ಷೆ. 5 ಸಿದ್ಧವಿಷಯಹೇತೂತ್ಪ್ರೇಕ್ಷೆ. 6 ಅಸಿದ್ಧವಿಷಯಹೇತೂತ್ಪ್ರೇಕ್ಷೆ.

ಗಿರಿಕಂದರಂಗಳೊಳ್ ತಪ |
ಮಿರೆ ಸುಚಿರಂ ಸಿಂಹಜಾತಿ ತನ್ಮಸ್ತಕಕೇ ||
ಸರದಂಷ್ಟ್ರನಖಂಗಳ್ ನರ |
ಹರಿಮೂರ್ತ್ಯಂತರ್ಗತಂಗಳಾದುವು ನಿಸದಂ ||೪೨|| 1
ಅವತಾರಕಾಲದುರಿಯೊ|
ಪ್ಲುವ ಮಾಲೆಗಳಿಡಿಯೆ ಧಗಧಗಧ್ವನಿಯಿಂದಂ ||
ಬುವಿಯಾಗಸಂಗಳೆರಡುಮ |
ನವರಿಂ ಕಿಡಿಗಳ್ ಸಿಡಿಲ್ದ ಮಿಂಚುಂಬುಳುಗಳ್ ||೪೩|| 2

### ೧೩. ಅತಿಶಯೋಕ್ತಿ.

ಬಿಲಮೊಂದು ನಭದೊಳದರೊಳ್ |
ನೆಲಸಿರೆ ಪೇಷಣಿಗಳಿಕ್ಕೆಲಂಗಳೊಳವರಾ ||
ಜ್ವಲನಂ ನಡುವೊಳ್ ಪುಗುತು |
ಜ್ವಲಿತಪ್ರಾಣರರೆದುರಿದು ಪೋಪರ್ ದೈತ್ಯರ್ ||೪೪|| 3
ಶರಧಿಯಿನಲ್ಲದೆ ಶಶಿಯೆಂ |
ತಿರದೆಂತು ಘನಶ್ರಿ ಮಿಂಚಿವಗ್ಗೆಂತು ಪರ ||
ಸ್ಪರಸಮ್ಮೇಳನಮಿನ್ನಸು |
ರರಾಜ್ಯಕುಳಿವೆಂತು ನೆರೆಯಲಿಂತುತ್ಪಾತಂ ||೪೫|| 4
ಪೊಸತೊಂದಿನನಿದಿದರ ಕಾಂ |
ತಿಸಮಾನಂ ಪಗಲೊಳೆಲ್ಲಮಸ್ತಮೆ ಇಲ್ಲಂ ||
ಅಸುರಗ್ರಹಮರಿಯದಿದೇ |
ನೆಸೆದಪ್ಪುದೊ ಪೊಸ್ತಿಲೊಳ್ ಮುನೀಂದ್ರಾಳಿನುತಂ ||೪೬|| 5
ಪಸರಿಸುತೆ ರಮಾಕ್ಷಿಚಕೋ |
ರಸುಖಾವಹಚಂದ್ರಿಕಾಚ್ಛಮಂ ಸ್ವಾಪ್ನಯದಾ ||
ಒಸರಿಸುತಮೃತಮನಾಸುಮ |

---

1 ಅಸಿದ ವಿಷಯಫಲೋತ್ಪ್ರೇಕ್ಷೆ. 2 ಗಮ್ಯೋತ್ಪ್ರೇಕ್ಷೆ. 3 ಅನುಭಯಾಭೇದರೂಪಕಾತಿಶಯೋಕ್ತಿ. 4 ನ್ಯೂನಾಭೇದರೂಪಕಾತಿಯೋಕ್ತಿ. 5 ಅಧಿಕಾಭೇದರೂಪಕಾತಿಶಯೋಕ್ತಿ.

ನಸರಂ ತಣಿಪಿಂದುವಾವುದೀಯಕಳಂಕಂ ||೪೭|| [1]

ಛವಿಯೊಳ್ ಧವಳಿಮೆಯಕ್ಕುಂ |
ಧವಳಿಮೆಯೊಳ್ ಛವಿಯದೆಂದುಮಾಗದದೀಗಳ್ ||
ತವೆ ವಿಪರೀತಮಿದೇಂ ಶಶಿ |
ಧವಳಿಮೆಯಿಂದುಣ್ಮುಗುಂ ರವಿಚ್ಛವಿವಿಸರಂ ||೪೮|| [2]

ಅನಗಸ್ತ್ರ್ಯೇಡಯುಜಮವಾ |
ಜಿನೀಗತಮುಮಾಪ್ರಸನ್ನತೆ ನೃಹರಿಗದರೊಳ್ ||
ಇನಶಶ್ಯಗ್ನಿಗಳಿಕ್ಕುಳಂ |
ಜನಯಿಸುಗುಂ ನತಮನಸ್ತಮೋಹತಿಯವರಿಂ ||೪೯|| [3]

ನರಹರಿಯೆನಲಮೃತತ್ವಂ |
ದೊರೆಗುಮದಂ ತಿಳಿಯದಮೃತಕೆಂದು ಸುರರ್ ಸಾ||
ಗರಮಂ ಕಡೆದು ಹಲಾಹಲ |
ದುರಿದು ಪೊಣರ್ದ್ದಸುರರೊಳ್ಬಳಲ್ದರ್ ಭ್ರಮೆಯಿಂ ||೫೦|| [4]

ಪೆರತೊಂದು ಮಹಿಮೆ ತೇಜಂ |
ಪೆರತೊಂದವನೇಚ್ಛೆನಿನತು ಪೆರತೊಂದು ಮುದಂ ||
ಪೆರತೊಂದು ಭೂರಿದತ್ವಂ |
ಪೆರತೊಂದನುಕಂಪೆ ನೃಹರಿ ಪೆರತೊಂದು ನವಂ ||೫೧|| [5]

ದುರಿತಕ್ಷಯಕೃನ್ನಾಮಂ |
ವರದತ್ವಂ ಸ್ವರ್ಗದತ್ವಮಮೃತಜನಿತ್ವಂ ||
ನರಹರಿಯ ಇನಿತುಮಿಾಕ್ಷಿಸಿ |
ಪರಿಗುಂಮುಚ್ಛ್ರುಮೆನುತ್ತೆ ನಲಿವಂ ಶಮನಂ ||೫೨|| [6]

ನರಹರಿ ದುಃಖಹರಂ ನೀ |

---

1 ಅಧಿಕತಾದ್ರೂಪ್ಯಾತಿಶಯೋಕ್ತಿ. 2 ಅನುಭಯತಾದ್ರೂಪ್ಯಾತಿಶಯೋಕ್ತಿ 3 ನ್ಯೂನತಾದ್ರೂಪ್ಯರೂಪಕಾತಿಶಯೋಕ್ತಿ. 4 ಸಾಪಹ್ನವಾತಿಶಯೋಕ್ತಿ-ಇದರಲ್ಲಿ ಆರು ಭೇದಗಳೂ ಇರುವುವು ,ಅವುಗಳಿಗೆ ಇಲ್ಲಲ್ಲಿಯ ಶ್ಲೋಕಗಳು ಕೆಲವು ಉದಾಹರಣೆಗಳಾಗುವುವೆಂದು ಇಲ್ಲಿ ಪ್ರತ್ಯೇಕವಾಗಿ ರಚಿಸಲಿಲ್ಲ. 5 ಭೇದಕಾತಿಶಯೋಕ್ತಿ. 6 ಸಂಬಂಧಾತಿಶಯೋಕ್ತಿ.

ನಿರೆ ಸಾಂಖ್ಯಮದೇಕೆ ಯೋಗನೇತಕ್ಕೆ ಮನ ||
ಕ್ಕರಿದೆನಲಶಾಂತಿ ಸನ್ನಿಂ |
ದಿರೆ ನೀನಾನಂದದಾತೃ ವೇದಾಂತದಿನೇಂ ||೫೩|| 1
ನಯನಂ ಬಿಡುವೊಡೆ ನೀನೆ |
ಮ್ಮಯ ಓಡುಗುಮಾರ್ತಿ ದಯೆಯದಕ್ಕೇರೆ ಸುಖೋ ||
ಜ್ವಯಮೆಮಗಕ್ಕುಗುಮೆಮಗ |
ಕ್ಷಯಭೂತಿಜನಿಕ್ಕುಮೊಡನೆ ನಿಟ್ಟಿಸೆ ನೃಹರೀ ||೫೪|| 2
ನರಹರಿಯುಂ ಪೂಜಿಪೆನೆನೆ |
ಸುರಿದತ್ತಿಪ್ಪಾರ್ಥಸಂಚಯಂ ಮಣಿವೆನೆಸಲ್ ||
ನೆರವಪ್ಪವು ಕಾಲದೊಳೆಂ |
ದೊರೆದುವು ಬಳಿಸಾರ್ದ್ದ ನಾಕಸೋಪಾನಂಗಳ್ ||೫೫||
ದುಗುಡಂ ಪೋದುದು ಮುಂ ಮನ |
ಕೊಗೆದುದು ಶಾಂತಿ ಸುಖಮುಕ್ಕಿದತ್ಮಾನಂದಂ ||
ಮಿಗಿಲಾಯ್ತರಿವು ಜಸಕ್ಕೆಡೆ |
ಜಗವಾಯ್ತೆಯ್ದಿದುದು ಬಳಿಕೆ ನೃಹರಿಕಟಾಕ್ಷಂ ||೫೬|| 4

## ೧೪. ತುಲ್ಯಯೋಗಿತೆ.

ಅವತರಿಸೆ ಸಂಜೆಯೊಳ್ ಶಶಿ-|
ಧವಳಂ ಕಂದಿದುವು ನೃಹರಿ ಯಬ್ಜಂಗಳ್ ದೈ ||
ತ್ಯವಧೂಮುಖಂಗಳುಂ ಕೈ |
ರವತತಿಯಲರ್ದುದು ಸುರಾಂಗನಾದೃಕ್ಚಯಮುಂ ||೫೭|| 5
ಸ್ವಿವೃದ್ಧಿಕ್ಷಯದಿನಿನಂ |
ಬಿಸುಗದಿರಿಂ ಜ್ವಾಲಧೂಮದಿಂದಗ್ನಿ ತೆರಂ ||
ಎಸೆದಪುವಿವಾದೊಡಂ ಪೋ |
ಲಿಸೆ ಬಾರವು ನೃಹರಿಮೂರ್ತಿಕಾಂತಿಗೆನಿಕ್ಕಂ ||೫೮|| 6

---

1 ಅಸಂಬಂಧಾತಿಶಯೋಕ್ತಿ. 2 ಕ್ರಮಾತಿಶಯೋಕ್ತಿ. 3 ಚಪಲಾತಿಶಯೋಕ್ತಿ. 4 ಅತ್ಯಂತಾತಿಶಯೋಕ್ತಿ. 5 ತುಲ್ಯಯೋಗಿತೆ-ಪ್ರಸ್ತುತಾಪ್ರಸ್ತುತೈಕಕ್ರಿಯಾನ್ವಯ. 6 ತುಲ್ಯಯೋಗಿತೆ-ಅಪ್ರಸ್ತುತೈಕಗುಣಾನ್ವಯ.

ಉರದೆಡೆಯೊಳೊದೆದನೋಳಂ ।
ಸರಣೆಂದನೊಳಂ ಸ್ವಹಿತಕೆ ಕಾರಣರೋಳಂ ॥
ಗಿರಿಯಿಂ ಪೃಷ್ಠನಿಘರ್ಷಕೆ ।
ನರಹರಿ ಪೂಜಿಪರೊಳಂ ಸಮಾನಂ ಕೃಪೆಯಿಂ ॥೪೯॥[1]
ದೊರೆಗುಂ ದ್ಯುಲೋಕಮಾಜಿಯು ।
ಮರಣದಿನಧ್ವರದಿನಭಯದಾನದೆ ತಪದಿಂ ॥
ಪರಹಿತದಿಂ ಪಿತೃಸೇವೆಯಿ ।
ನರದಿಂ ರಿತದಿಂದೆ ನೃಹರಿಯ ಸ್ಮರಣೆಯಿನುಂ ॥೬೦॥[2]

## ೧೫. ದೀಪಕ.

ಪರಮೇಷ್ಠಿಕಪೋಲದೆ ಪಾಂ ।
ಚರದಿಂ ಜಟೆಯಿಂದೆ ಭಸ್ಮದಿಂ ಹರನೆಸೆವಂ ॥
ನರಹರಿಯುಂ ದೈತ್ಯಕಳೇ ।
ಬರದಿಂ ಕರುಳ್ಸರದೆ ಕೇಸರದೆ ಲೋಹಿತದಿಂ॥೬೧॥
ಸರಭಸನಾ ಪಕ್ಷಿಮದಿ ।
ಗ್ವರನಾರೀಮುಖಮನೊಲ್ದಿನಂ ಬಣ್ಣಿಸಿದಂ ॥
ತರಳಂ ಪ್ರಹ್ಲಾದನುಮಾ ।
ದರದೆ ನೃಹರಿಭವ್ಯಗುಣಮದಂ ಬಣ್ಣಿಸಿದಂ ॥೬೨॥
ಪಿರಿದೆನಿಸಿರೆ ಪಗಲೊಳ್ ಬಾ ।
ಯರಿಕೆ ಚಕೋರಕೆ ಸುಧಾಂಶು ಪೋಗಿಸಿದನದಂ ॥
ನಿರವಗ್ರಹದುಪಟಳವಮನ ।
ಸುರರಿಂ ತಾಪಸಗೆ ನೃಹರಿಯುಂ ತೊಲಗಿಸಿದಂ ॥೬೩॥[5]
ನರಹರಿಯವತರಿಸಲ್ ದಿವಿ ।
ಜರ ಖೇದಕೆ ನಿಲಯಮಾಯ್ತು ರಕ್ಷಃಪತಿಜಂ ॥
ತೊರೆದೆಲ್ಲಮನೋಡಿದ ದೈ ।
ತ್ಯರ ಪಿಂಡಿಗೆ ನಿಲಯಮಾಯ್ತುದುರಗಭುವನಮುಂ ॥೬೪॥

---

1 ತುಲ್ಯಯೋಗಿತೆ--ಹಿತಾಹಿತವೃತ್ತಿತುಲ್ಯ. 2 ತುಲ್ಯಯೋಗಿತೆ-ಗುಣೋತ್ಕರ್ಷ ಸವಿಾಕರಣ. 3 ದೀಪಕ-ವರ್ಣ್ಯಾವರ್ಣ್ಯಧರ್ಮೈಕ್ಯ. 4 ಪದಾವೃತ್ತಿ-ದೀಪಕ. ಅರ್ಥಾವೃತ್ತಿದೀಪಕ. 6 ಪದಾರ್ಥಾವೃತ್ತಿ ದೀಪಕ.

### ೧೬. ಪ್ರತಿವಸ್ತೂಪಮೆ.

ನರಹರಿ ನಿನ್ನ ಸುಧಾರಸ |
ಭರಿತಾಂಘ್ರಿನಿಮಗ್ನನೆನಗೆ ವಾಂಛಿತಮಿನ್ನೇಂ ||
ಪರಿಪೂರ್ಣಪುಷ್ಪರಸತಾ |
ಮರಸಗತಂ ತುಂಬಿಗಿನ್ನದೊಂದೆಳಸಿಕೆಯೇ ||೬೫|| 1



ಅರಿದನೆ ನೃಹರಿಧ್ಯಾನಮು |
ನರಿವಂ ತತ್ಪಾದಮಗ್ನತಾನಂದಮುದಂ ||
ಶಿರಿದೆನಿಪ ಸೂತಿವೇದನೆ |
ಯಿರವಂ ತಿಳಿದಪಳೆ ಬಂಜೆನೇಗ್ ಲವಮಾನುಂ ? ||೬೬|| 2

### ೧೭. ದೃಷ್ಟಾಂತ.

ಹರಿಭಕ್ತರೆನಿಬರೋ ನರ |
ಹರಿತತ್ತ್ವಮನರಿದನೊರ್ವನೇ ಪ್ರಹ್ಲಾದಂ ||
ಸುರರೊಳರೆನಿಬರೊ ವೃತ್ರಾ |
ಸುರನ ವಧೋಪಾಯಮರಿದನೊರ್ವನೆ ಇಂದ್ರಂ ||೬೭|| 3

ನರಹರಿಯ ಜಾನಕೆ ಮನಂ |
ಸ್ಥಿರಮಾಗೆ ಸಪತ್ನರಿರದೆ ಮಡಿದರದಿನ್ನೇಂ ||
ತರಣಿಯಡರ್ವನ್ನೆವರಂ |
ಗಿರಿಯಂ ಮೂಡಲ ತಮಂ ಗಡಾ ನೆಲಸಿಕ್ಕುಂ ||೬೮|| 4

### ೧೮ ನಿದರ್ಶನೆ

ನರಹರಿಯ ಜಾನಮಿಲ್ಲದ |
ಪರಧರ್ಮಂ ಲವಣಮಿಲ್ಲದೂಟಂ ಗೇಹಂ ||
ತರಳರ್ಕಳಿಲ್ಲದ ಹಿಮಾಂ |
ಶುರಹಿತಮುಡುತತಿ ವಿನಾಯಕಂರನ್ನಸರಂ ||೬೯||

### ೧೯ ಸಹೋಕ್ತಿ.

ನೃಹರಿವರದಶಿ ಸುರಾನೋ |

1 ಪ್ರತಿವಸ್ತೂಪಮೆ. 2 ವೈಧರ್ಮ್ಯಗರ್ಭಪ್ರತಿವಸ್ತೂಪಮೆ. 3 ದೃಷ್ಟಾಂತ
4 ವೈಧರ್ಮ್ಯ ಗರ್ಭದೃಷ್ಟಾಂತ.



ಕಹ ಕೀರ್ತಿಯುತಂ ಧ್ರುವಸ್ಥಿರಂ ಸುಕಟಾಕ್ಷಂ ||
ಮಹಿತಕ್ಷಮೆಯುವನ ಮಹೀ |
ಸಹನಪ್ರಥಮೊಲ್ಮೆ ರತ್ನದೀಪಸಮಾಖ್ಯಂ||೨೦|| [1]

ಸಕಲೇಷ್ಟಾರ್ಥಪ್ರದನೀ |
ಯಖಿಲಾಮರನಾಥನೃಹರಿಯಿರೆಯುಂ ಭಜಿಪರ್ ||
ಸೊಗಕಪರದೇವತೆಯುನಂ |
ಘ್ರಿಘಾತದಾ ಬಂಜೆಯಾವು ಪಾಲ್ಗೆನೆ ಕರೆವರ್ ||೨೧|| [2]

ಬರಿದೆನಿಪಂದಿಕ್ಕೇ ಗುಹಾಂ |
ತರಮೂದೊಡಮಕ್ಕುನೇಂ ಸಮಣಿಕಾಂತಿ ತಮ ||
ಕ್ಕಿರದೆಂಬವೊಲಜ್ಞಾನಂ |
ನರಹರಿಯ ಸ್ಮರಣಯೋಗದಳಿಗುಂ ಮನದಿಂ ||೨೨|| [3]

ಅವತರಿಪಾಗಳೆ ದೈತ್ಯಾ |
ಸುವನಾರಿಸಿ ಪೊರೆದನೆಳೆಯುನಂ ನರಹರಿ ಶೋ ||
ಪ್ಪರ್ವೊಲೀಶ್ವರನೊಗೆವುದು ದು |
ಷ್ಟವಿನಾಶಕೆ ಶಿಷ್ಟರಕ್ಷಣಕ್ಕೆನುತಿಳೆಯೊಳ್ ||೨೩|| [4]

## ೨೦ ವ್ಯತಿರೇಕ

ಗಿರಿಯಂತುಚ್ಚಂ ಮತ್ತಮ |
ಪರುಷಂ ಗಂಭೀರನುದಧಿವೊಲ್ ಮಧುರಗುಣಂ ||
ಸುರರಂತಿರೆ ಪೂಜ್ಯನಧಿಕ |
ತರಪ್ರಭಾವಂ ದ್ಯುಮಣಿವೊಲೆಸೆವನತಿಗ್ಮಂ ||೨೪|| [5]

ನರಹರಿ ನೀನೆನ್ನುಮನಂ |
ತಿರೆಕರೆವರ್ ನೀಂ ಪುರಾಣನೆನ್ನತುಮುದ್ಧೃಥಂ ||

---

1 ಪದಾರ್ಥಾವೃತ್ತಿನಿದರ್ಶನಾ--ಉಪಮಾನಧರ್ಮಾರೋಪ. 2 ಪದಾರ್ಥಾವೃತ್ತಿ ನಿದರ್ಶನಾ-ಉಪಮೇಯಧರ್ಮಾರೋಪ. 3 ಅಸದ್ಬೋಧಕ ನಿದರ್ಶನಾಲಂಕಾರ. 4 ಸದ್ಬೋಧಕ ನಿದರ್ಶನಾಲಂಕಾರ. 5 ಉಪಮೇಯಾಧಿಕ್ಯವ್ಯತಿರೇಕಾಲಂಕಾರ.

ಹರೆಯಂ ವಿಗುಣರುಪಾವಿಂ |
ಪರಮಾತ್ಮ ಇದೊಂದೆ ಪ್ರತ್ಯಗಾತ್ಮನೆನಿಪ್ಪಂ||೨೫|| [1]
ಸುರನದಿ ಯೊರ್ವ್ವಂಗಡಿಯೊಳ್ |
ಶಿರದೊಳೊರ್ವ್ವಂಗೆ ಕರ್ಪ್ಪು ಮೆಯ್ಯೊಳ್ ಕೊರಲೊಳ್ ||
ಸ್ಮರಜನಕತೆ ಸ್ಮರಾರಿತೆ |
ನರಹರಿಗೆ ಹರಂಗೆ ಯೋಗಮಾತ್ರದೆ ಭೇದಂ ||೨೬|| [2]

೨೧. ಸಹೋಕ್ತಿ.

ಪರಿಯೆ ಹಿರಣ್ಯಕಶಿಪುವಸು |
ವೆರಸುಮಹೋಗ್ರತ್ವಮೊಗೆಯೆ ಸೌಮ್ಯತೆ ಲಕ್ಷ್ಮೀ ||
ಪರಿರಂಭದೊಡನೆ ಬಂದಾ |
ಸುರರರ್ಚಿಕುಮೆಯ್ದೆ ನೃಹರಿಯುಂ ನಿರ್ಭಯದಿಂ||೨೭|| [3]

೨೨. ವಿನೋಕ್ತಿ.

ಅಡಿಗಡಿಗೆ ನೃಹರಿಯೆಂಬುದು |
ಕಡುನಲ್ಮೆಯೊಗೆಯಿಪೊಡಂ ನಿಜಾಂತಃಕರಣಂ ||
ದೆಡಮಪ್ಪ ಭಕ್ತಿಭರದಿಂ |
ದೊಡವೆರೆಯದಿರಲ್ಕೆ ರಾಜಸಂ ಜಪಮೆನಿಕುಂ ||೨೮|| [4]
ಉಡುರಾಜನೊಗೆಯೆ ಕಳ್ತಲೆ |
ವಿಡುತುಂ ಮೆರೆವಿರುಳವೊಲ್ ನಿಶಾಚರಯೂಥ ||
ಕ್ಕೊಡೆಯಂ ನರಹರಿಜನ್ಮದೆ |
ಮಡಿಯಲ್ ಸತ್ಯಯುಗಮೆನಿಸಿ ಕೃತಮದು ಮೆರೆಗುಂ ||೨೯|| [5]

೨೩. ಸಮಾಸೋಕ್ತಿ.

ನೋಣೆದಾವರಿಸಾತಪಕಾ |
ರಣನಂ ಗರ್ಜ್ಜಿಸುತೆ ಬಿದಿರ್ಚ ಸತ್ಪಾಂಥವಧೂ ||
ಗಣಮಂ ಶಿಖಿಗಳನೊಲವಿಂ |
ಕುಣಿಯಿಪ ತಳ್ಕೈಸುಗುಂಘನಂ ಚಂಚಲೆಯಂ ||೩೦|| [6]

1 ಉಪಮಾನಾಧಿಕ್ಯವ್ಯತಿರೇಕಾಲಂಕಾರ. 2 ಅನುಭಯಾಧಿಕ್ಯವ್ಯತಿರೇಕಾಲಂಕಾರ. 3 ಪ್ರಥಮಭೇದ. 4 ದ್ವಿತೀಯಭೇದ. 5 ಪ್ರಥಮಭೇದ. 6 **ಸಾರೂಪ್ಯಸಮಾಸೋಕ್ತಿ.**

ಧನಧಾನ್ಯಗೋಶ್ವಶಿಬಿಕಾ |
ಸನದಾಸಾಕರಮದಾಯ್ತು ಬಯಲ್ಬಂಧುಸುಹೃ ||
ಜ್ಜನಕೆ ಪರಾಶ್ರಯಮುಂ ಪ್ರಥೆ |
ಜನೋಕ್ತಿಮಾತ್ರಾವಶಿಷ್ಟಮುಂ ನೃಹರಿ ಸರಣ್ ||೮೧||

### ೨೪. ಪರಿಕರ.

ಒರೆವೊಡೆ ಸಾಸಿವೊರ್ಮೆಗದಿಂ |
ದುರಗಂ ಒರೆವೊಡೆ ಸಹಸ್ರ ಕರದಿಂಮಿಹಿರಂ ||
ಪರಿಕಿಸೆ ಸಾಸಿರ್ಗಣ್ಣಿಂ |
ಸುರಪಂ ನರಹರಿಯ ವಿಸ್ತೃತಂ ಗುಣಲೇಶಂ ||೮೨||

### ೨೫. ಪರಿಕರಾಂಕುರ.

ಅರಿಷಡ್ವರ್ಗದತಂ ಭೀ |
ಕರಸಂಸೃತಿಸರ್ಪವಿಷವಿಮೂರ್ಛಿತರೆಮ್ಮಂ ||
ಪೊರೆ ಯೋಗಾರೂಢನೆ ನರ |
ಹರಿ ಸೌಮ್ಯ ಖಗೇಂದ್ರರಥ ಸುಧಾಂಶುಸಮಾಂಗಾ ||೮೩||

### ೨೬. ಶ್ಲೇಷ.

ಪರಿರಂಜಿತಹಂಸಾಂತಃ |
ಕರಣಚಿದಾನಂದಮೂರ್ತಿಯಾತ್ಮಭು ನಿನ್ನಿಂ ||
ಪರಿಪರಿಯ ಜಂಗಮಸ್ಥಾ |
ವರಜೀವಿಗಳೊಗೆ ವುವಾತ್ಮಕರ್ಮದ ವಶದಿಂ ||೮೪|| [1]

ನಿಲೆಪ್ರಹ್ಲಾದಂ ಸ್ತಂಭದ |
ಕೆಲಬೊಳ್ ನೃಹರಿಸ್ತವಕ್ಕೆ ದೈತ್ಯಮಹಿಪಿಯಾ ||
ಸಲೆ ಲುಬ್ಧಶಿಲೀಮುಖದಾ |
ಕುಲಿತಂ ವನವೃದ್ಧಕಮಲಮಂ ಪೋಲ್ತುದು ಕಣ್ ||೮೫|| [2]

---

1 ಪ್ರಕೃತಾನೇಕ ವಿಷಯಶ್ಲೇಷ. 2 ಅಪ್ರಕೃತಾನೇಕವಿಷಯಶ್ಲೇಷ.

ಉದಯಿಸೆ ದೇವಂ ಸಂಜೆಯೊ |
ಳೊದಗಿಸಿದಂ ಕುವಲಯಕ್ಕೆ ರಕ್ತಶರೀರಂ ||
ಮುದವಮಂ ಸುಮನಸ್ಸಂದೋ |
ಹದ ಪೆರ್ಚ್ಚಿದುದಾ ವಿಹಾರಮಗಳರಹಿತಂ ||೮೬|| [1]

## ೨೬. ಅಪ್ರಸ್ತುತಪ್ರಶಂಸೆ.

ದ್ವಿರದೋತ್ತಮಾಂಗಮಾಂಸಂ |
ದೊರೆವನ್ನೆವರಂ ಸ್ವಶಕ್ತಿಯಿಂ ಧನ್ಯಂ ಕೇ |
ಸರಿ ಸೈತಿಪ್ಪುದು ಪಸಿವಿಂ |
ಹರಣಮೆ ಪೋಪನಿತು ಕಷ್ಟದಶೆಯಾಂತಿರೆಯುಂ ||೮೭|| [2]
ಅಪಚರಿಸಿ ನೃಹರಿಯೊಳನು |
ತಪಿಸುತ್ತಪರಾಧಮುಂ ಕ್ಷಮಿಪುದೆನುತಾವಂ ||
ಉಪಚರಿಸಿ ಬೇಡನವನ |
ಗ್ನ್ಯುಪಕಂತಂ ಮೂಢಬುದ್ಧಿ ನಿದ್ರಿಪನಭಯಂ ||೮೮|| [3]
ಪರಹಿತಮೆ ನೃಹರಿಪೂಜನ |
ಮುರಿದಿಂತು ಬಳಲ್ದು ತಣಿವ ಸಂತರಗಣ್ಯರ್ ||
ಪರಹಿಂಸೈಕಪರರ್ ನಿ |
ಷ್ಕರುಣರ್ ನರರಾಕ್ಷಸರ್ ಪ್ರತಾಪಯುತರ್ಕಳ್ ||೮೯|| [4]
ನರಹರಿಯಿಂದುಧವಳನೆನಿ |
ಸಿರೆ ನಲಿದುಮುವಂ ಸ್ವಸಾಮ್ಯಕಾಪ್ರತಿಮಾಸಂ ||
ತೊರೆವಾಸೆಯಿಂ ಕಳಂಕಮ |
ನಿರದೊಗೆವಂ ಬಳೆವನಂತೆ ನಾಣಿಂ ಕ್ಷಯಿಪಂ ||೯೦|| [5]
ಮೊದಲೊಳ್ ನಾರಾಯಣ ರೂ |
ಪದೆ ನೀಂ ತ್ವತ್ಸ್ಪುಮೆ ಬೆರೆಯೆ ಕಡಲೊಳ್ ಶಯಿಸಲ್ ||

---

1 ಪ್ರಕೃತಾಪ್ರಕೃತಾನೇಕವಿಷಯಶ್ಲೇಷ. 2 ಸಾರೂಪ್ಯನಿಬಂಧನಾಪ್ರಸ್ತುತಪ್ರಶಂಸೆ. 3 ಸಾಮಾನ್ಯನಿಬಂಧನಾಪ್ರಸ್ತುತಪ್ರಶಂಸೆ. 4 ವಿಶೇಷನಿಬಂಧನಾಪ್ರಸ್ತುತ ಪ್ರಶಂಸೆ. 5 ಕಾರಣನಿಬಂಧನಾಪ್ರಸ್ತುತಪ್ರಶಂಸೆ.

ಒದವಿದ ಕೌಸ್ತುಭರೂಪದಿ |
ನದು ನಿನ್ನೆರ್ದೆಗೆಯ್ದಿದತ್ತು ನೃಹರಿ ಬಳಿಕ್ಕಂ ||೯೧|| [1]
ನೆರೆ ತಾಪತ್ರಯದೌಷಧ |
ವರದಿಂ ತ್ವತ್ಸ್ಮೃತದಿನುಸಿರೆಲರ್ ಬೇರೆಸಗಲ್ ||
ಪರಿಪಕಡಂಕರತತಿವೊಲ್ |
ನರಹರಿಯೆ ಮೃಗಾಂಕಘೃಣಿಗಳೆತ್ತಲುಮಲೆಗುಂ ||೯೨|| [2]
ಒಡೆವ ಸ್ತಂಭದದನಿ ಕಿವಿ |
ಗಡರೆ ನಿಶಾಚರವಧೂಜನೇಕ್ಷಣಜಲದಾ ||
ಗಡಣಂ ಯಮುನಾಂತರಮೇಂ |
ಬೊಡರ್ಚುಗುಂ ಭ್ರಾಂತಿಯುಂ ಸಕಜ್ಜಲಮಾಗಳ್ ||೯೩|| [3]

## ೨೭. ಪ್ರಸ್ತುತಾಂಕುರ.

ಎಲೆ ಮೃಗಮೆ ನಿನ್ನ ಪೊಡೆಯೊಳೆ |
ನೆಲಸಿರೆ ಕಸ್ತೂರಿ ತತ್ತ್ವಮರಿಯದಿದಂ ನೀಂ ||
ಪಲದೆಸೆಗೆ ಮೂಗನಿತ್ತೊಡೆ |
ಫಲಮೇಂ ಬೇರೆಡೆಯಿನೆಯ್ದಿದಪುದೆ ಸುಗಂಧಂ ||೯೪|| [4]
ಮೆರೆವ ಜ್ವಾಲಾಮಾಲಾ |
ಪರಿವೇಷಜಿತೇಂದುಪರಿಧಿಯಾದಶದಿಶೆಯಂ ||
ಭರಯಿಪ್ಪವೊಲಪ್ಪೀನರ |
ಹರಿಮುಖಸೌಂದರ್ಯಲಹರಿಯೀಗೆಮಗೊಳ್ಪಂ ||೯೫|| [5]
ಕೊರಲಕರುಳ್ಗಳ್ ಜ್ವಾಲಾ |
ಭರದಿಂ ನೀಲಮಣಿರುಚಿಯನಾಂತುತುವು ನಿಜಕೇ ||
ಸರತತಿ ತಪ್ತಂ ಮೂಪಾ |
ಹಿರಣ್ಯದೀಧಿತಿಯನೊಸರ್ದುದಾನರಹರಿಯಾ ||೯೬| [6]

---

1 ಕಾರ್ಯನಿಬಂಧನಾಪ್ರಸ್ತುತಪ್ರಶಂಸೆ. 2 ಕವಿಕಲ್ಪಿತಕಾರ್ಯಕಾರಣಭಾವನಿಬಂಧನಾಪ್ರಸ್ತುತಪ್ರಶಂಸೆ 3 ಕವಿಕಲ್ಪಿತಕಾರ್ಯನಿಬಂಧನಾಪ್ರಸ್ತುತಪ್ರಶಂಸೆ. 4 ಸಾರೂಪ್ಯನಿಬಂಧನಾಪ್ರಸ್ತುತಾಂಕುರ. 5, 6 ಸಂಬಂಧಾಂತರನಿಬಂಧನಾಪ್ರಸ್ತುತಾಂಕುರ (ಎರಡು ಶ್ಲೋಕಗಳಿಂದ ದಿಙ್ಮಾತ್ರವಾಗಿ ಉದಾಹರಿಸಲ್ಪಟ್ಟಿರುವುದು).

## ೨೮ ಪರ್ಯಾಯೋಕ್ತ.

ಮನೆ ಪಾಲ್ಗಡಲೆ ಭುಜಂಗೇ ।
ಶನೆ ಛತ್ರಂ ಕೈದು ನಖಮೆ ಕರುಳ್ಗಳೆ ಹಾರಂ ॥
ಇನಶಶ್ಯಗ್ನಿಗಳೇ ಲೋ ।
ಚನಮಾವಂಗೆಂದುಮಿರ್ಕ್ಕವಂ ಮನ್ಮನದೊಳ್ ॥೯೭॥[1]

ಯಮಿಯೆ ಕೆಲದೊಳಿರ್ಕ್ಕಂ ನೃಹ ।
ರಿಮಂದಿರಂ ನಿನಗದಿರ್ಕ್ಕೆಯಪ್ಪುದು ತುಲಸೀ ॥
ಸುಮತತಿಫಲಾದಿಯಂ ಕೃ ।
ತ್ರಿಮವನದಿಂ ತಿರಿತರಲ್ಕೆ ಪೋಪೇನದರಿಂ ॥೯೮॥[2]

## ೨೯. ವ್ಯಾಜಸ್ತುತಿ.

ದುರಿತಾತ್ಮಕರ್ಕಳುಮಂ ಮು ।
ಕ್ತರನೆಸಗಿದಪಯ್ ವಿವೇಕಮೇಂ ನಿನತಿದು ದೈ ॥
ತ್ಯರುಮಂ ಸಗ್ಗಕೆ ಕಳಿಪುನೆ ।
ನರಹರಿಯಿತ್ತಪಯಪಾತ್ರಜಯಃಕಂ ಸಿರಿಯುಂ ॥೯೯॥[3]

ಸಿರಿ ನಿನ್ನರ್ಧಾಂಗಂ ನರ ।
ಹರಿ ರಿಕ್ತತೆ ರಾಜ್ಞಿಯೆನಗೆ ನೀಂ ತಿಳಿದಂಪ್ರೀ ॥
ಪರಿವೃತಮತಿಯಾಂ ನೀನೀ ।
ಶ್ವರನಾಂ ದೃಪ್ತಾನುಜರನದಿಂತು ವಿಭಾಗಂ ॥೧೦೦॥[4]

ಸುರ ನೀನಾರ್ ಹರಿದಾಸಂ ।
ವರಮಿತ್ತಜನೆಮಗೆ ಬೆಚ್ಚಿ ನೇಹಿಪನೆತ್ತಲ್ ॥
ಸುರರೆನಲಲ್ಪಾಯುಃವಿನುಂ ।
ಪೊರೆಯಲ್ವೇದಮನಶಕ್ತನೆತ್ತಲೊಪರಿದಂ ॥೧೦೧॥[5]

ಗುರುಶುಶ್ರೂಷಾಕ್ಲೇಶಮ ।
ನರಿಯೆ ಮನೋನಿಗ್ರಹಕ್ಕೆ ಯತ್ನಿಸೆ ಷಟ್ಕ ॥
ರ್ಮರುಜೆಗೆಳಸೆ ಪೇಳ್ ಯುಕ್ತಾ ।
ಚರಣೆಯನುಳಿವೆ ಗಡ ಭಕ್ತ ಸುಖತತ್ತ್ವಮದಂ ॥೧೦೨॥[6]

---

1 ವಚೋಭಂಗ್ಯಂತರಾಶ್ರಯನಿಬಂಧನಾಪರ್ಯಾಯೋಕ್ತ. 2 ವ್ಯಾಜಬದ್ಧಪರ್ಯಾಯೋಕ್ತ. 3 ನಿಂದಾಸ್ತುತಿ. 4 ಏಕವಿಷಯಗಸ್ತುತಿನಿಂದೆ. 5 ಭಿನ್ನವಿಷಯಗತನಿಂದಾಸ್ತುತಿ 6 ಭಿನ್ನವಿಷಯಗಸ್ತುತ್ಯಾನಿಂದಾಭಿವ್ಯಕ್ತಿ.

ನರಹರಿಯೆನ್ನೆಗವೆತ್ತಲ್ |
ಚರಿಸುದುದೀ ಜೊನ್ನವಕ್ಕಿ ತಪವಮಾವುದದಂ ||
ಚರಣನಖಂಬೊಲ್ ನಿನ್ನತು |
ಮೆರೆವಿಂದುವ ಕುಡಿಗುಮೇತರಿಂ ರುಚಿತತಿಯಂ, ||೧೦೩|| 1

## ೩೦. ವ್ಯಾಜನಿಂದೆ.

ಚರಿಸಿಚ್ಚೆಯಿಂದೆ ದಾಂಭಿಕ |
ಸಿರಿಯುತರೊಳ್ ನೃಹರಿಭಕ್ತರೊಳ್ ನಯಯುತರೊಳ್ ||
ವಿರಚಿಸಿದನೆ ಸಖ್ಯಮನಾ |
ವಿರಿಂಚಿಯೇ ನಿನಗೆ ಗರ್ಹಣೀಯಂ ಪಿರಿದುಂ ||೧೦೪||

## ೩೧. ಆಕ್ಷೇಪ.

ಸವಿವೆನೆಲೆ ಸುಧೆಯೆ ನಿನ್ನಂ |
ದಿವಿಜತೆಯಂ ಸುಕೃತರಾಶಿಯಿಂ ದೊರೆಕೊಳುತುಂ ||
ತವೆಯೊರ್ಮ್ಮೆ ಬಯಪುದೇತ |
ರ್ಕ್ಕವನಿಯೊಳೆ ರುಚಿರನೃಹರಿನಾಮಮದಿರ್ಕ್ಕುಂ ||೧೦೫|| 2
ಪರಮಂ ತ್ರ್ತ್ವಂತಿಳಿದೊಡ |
ಮರಿಯುದೊಡಂ ಭೇದವಾದಮಂ ಸರ್ವಮನಾ ||
ನರಸಿರ್ಪ್ಪನಿನ್ನಿನಾನರ |
ಹರಿನೀನೆನ್ನಿಂದಮೇಕದೇಶನಿನಲ್ಲಂ || ೧೦೬|| 3
ಅಪಜಯದಿಂದವಮತಿಯಿಂ |
ತಪಿಪೆನ್ನನುಪೇಕ್ಷಿಪೊಡೆ ಉಪೇಕ್ಷಿಸು ನೃಹರೀ ||
ಚಪಲಮೆ ಲಭಿಕುಂ ಸರಣಂ |
ದಪಗಾರ್ಯುದಾರ್ತ್ರೈ ಸಿನ್ನತೇ ಸಾಯುಜ್ಯಂ ||೧೦೭|| 4

## ೩೨. ವಿರೋಧಾಭಾಸ.

ನರಹರಿಯೆ ನಿನ್ನಮೈಮೆಯ |
ಪರಿಯನದಾರ್ತಿಳಿಯಲಪ್ಪರುದಯಿಪಾರ್ವಗಳ್ ||

---

1 ಅನ್ಯಸ್ತುತಿವ್ಯಾಜದಿಂದ ಅನ್ಯಸ್ತುತಿ. 2 ಉಕ್ತಪ್ರತಿಷೇಧಗರ್ಭಾಕ್ಷೇಪ. 3 ನಿಷೇಧಾಭಾಸಗರ್ಭಾಕ್ಷೇಪ. 4 ನಿಷೇಧವನ್ನು ಮುಚ್ಚಿ ಬೇರೊಂದು ವಿಷಯ ವ ಕ್ಯವಾಗುವಂತೆ ಹೇಳುವುದು.

ಮೆರೆಯುತ್ತೆ ಮಿತ್ರಜಿತ್ತಿನ |
ಲಿರದಾಕ್ಷಣದೊಳ ಮಿತ್ರಜಿತ್ತಾದಯಲಾ ||೧೦೮||

೩೩. ವಿಭಾವನೆ.

ಎರಚದೆ ಗುಗ್ಗುಳುವಂ ನಿ |
ನ್ನುರಿಗಳವುಣ್ಮಿದುವು ಮಸೆಯದಾದುದು ದಂಷ್ಟ್ರಂ ||
ನೆರೆ ಶಿತಮದು ಮೊನೆಗೆಯ್ಯದು |
ಗುರುಮಾಯ್ತು ತಿತೀಕ್ಷ್ಣಮಸುರವಧೆಯೊಳ್ ನೃಹರೀ ||೧೦೯|| 1
ಮೆರೆವಜ್ವಾಲಾಮಾಲಾ |
ಪರಿಧಿ ನೃಹರಿಯಾ ಸುದೂರದೊಳೆ ಸೋಂಕದೆ ದ ||
ಳ್ಳುರಿಯಂ ಶೋಕಾಗ್ನಿಯ ದೈ |
ತ್ಯರ ಪೆಣ್ಗಳ ಹೃದಯದೊಳ್ನಿ ಮಿಚ್ಚೀದುದಾಗಳ್ ||೧೧೦|| 2
ಅತಿಚಿತ್ರಮಿದು ನೃಹರಿ ನಿ |
ನ್ನತು ನೀಡುಂ ತಪಿಸುಗುಂ ಪ್ರತಾಪಜ್ವಲನಂ ||
ದಿತಿಸುತರನಗ್ನಿಯಂ ಕ |
ಟ್ಟುತೆ ತಂದರನುಳಿವುತಗ್ನಿಭೀತಂ ಜನಮಂ ||೧೧೧|| 3
ಎನಿತದ್ಭುತಮಿದು ಪಂಚಾ |
ನನನಿಂದಂ ಸ್ತನಿತರವಮದುಣ್ಮುತ್ತಿ ಕ್ಕೀಂ ||
ಇನಶಶ್ಯಗ್ನಿಗಳಿಂ ಲೋ |
ಜನಮಂಬಿತೆಗೆಯ್ವುತಿಪ್ಪ ವಿದ್ಯುತ್ತತಿಯಂ ||೧೧೨|| 4
ಉದಯಿಸೆ ನೃಕೇಸರಿ ಮಹಾ |
ಮುದದಿಂ ದಿಗಿಭಂಗಳುಬ್ಬುಗುಂ ನಲಿಗುಂ ಹ ||
ಷೇದೆ ವನವೃದ್ಧಗಣಂ ಕಣ್ |

---

1 ಕಾರಣವಿಲ್ಲದೆ ಕಾರ್ಯಹುಟ್ಟುವುದು ಪ್ರಥಮಭೇದ. ೨ ಕಾರಣಗಳು ಸಮಗ್ರವಾಗಿರದೆ ಕಾರ್ಯೋತ್ಪತ್ತಿ, ದ್ವಿತೀಯಭೇದ. ೩ ಪ್ರತಿಬಂಧಕವಿದ್ದರೂ ಕಾರ್ಯೋತ್ಪತ್ತಿಯಾಗುವುದು. 4 ಕಾರಣವಲ್ಲದುದರಿಂದ ಕಾರ್ಯಹುಟ್ಟುವುದು.

ಬಿದುವೆನೆ ಕಣ್ಗುಡ್ಡೆಯಾಯ್ತು ತದ್ಗತಹರಿಣಂ ॥೧೧೩॥ 1

ಕರುಣಾಪಾಂಗಚಟಿತ್ರಿಂ ।
ಪರಮಾನಂದದ ಪಯೋದಮಾಶುಭ್ರಕರಂ ॥
ದರಹಸಿತಜ್ಯೋತ್ಸ್ನೆಯಿನಾ ।
ನರಹರಿಯಾ ಸುಲಭಮಪ್ಪೊಡಮೃತಕೆ ಜನಿಕುಂ ॥೧೧೪॥ 2

## ೩೪ ವಿಶೇಷೋಕ್ತಿ.

ಅನುಕಂಪಿಸೃ ಹರಿ ನನ್ನಿಯು ।
ವನ ಮಾಲಾಮಂತ್ರಕವಚಪಂಜರತತ್ತ್ವಂ ॥
ಅನುವಿಂ ನಂಬಿದನಿವನುಂ ।
ಜನಿಸದು ಫಲಮಾದೊಡಂಗಡೆಂಬುದು ದಿಷ್ಟಂ ॥೧೧೫॥

## ೩೫ ಅಸಂಭವ.

ಅರಿದರದಾರ್ ದೈತ್ಯೇಶನ ।
ಹರಿವಿದ್ವೇಷಿಯ ತನೂಜನಾಗದೆ ಭೀತಂ ॥
ನರಹರಿಯನಯಸ್ತಂಭದಿ ।
ನಿರದುಣ್ಮಿ ವನ್ಮೇಲೊಡಚ್ಚಲಪ್ಪನೆನುತ್ತುಂ ॥೧೧೬॥

## ೩೬. ಅಸಂಗತಿ.

ಬಳಸೆಜ್ವಾಲಾಮಾಲಾ ।
ವಳಿ ನೃಹರಿಯನುರಿದುವಸುರವನಿತೆಯರೆರ್ದೆಗಳ್ ॥
ಖಳದೈತ್ಯಾಂಘ್ರಿಕ್ಷತಜದಿ ।
ನಿಳೆ ನಾಂದುದು ಸೋಂಕಲವನುಗುರ್ ದಿತಿಜಪನಂ ॥೧೧೭॥ 3
ನರಹರಿ ಮಡಿಪೆ ಹಿರಣ್ಯಾ ।
ಸುರನಂ ಕಜ್ಜಳಮುರೋಜಕೊರುಗೆ ಪತ್ರಂ ॥
ಕರಕಾಯ್ತು ತಿಲಕಮುಗುಗಾ ।

---

1 ವಿರುದ್ಧಕಾರಣದಿಂದ ಕಾರ್ಯೋತ್ಪತ್ತಿಯಾಗುವುದು 2 ಕಾರ್ಯದಿಂದಲೇಕಾರಣಹುಟ್ಟುವುದು. (ಇವೆಲ್ಲವೂ ವಿಭಾವನಾ ಭೇದಗಳು) 3 ಕಾರ್ಯಹೇತುಭಿನ್ನದೇಶತ್ವಗರ್ಭ.

ಆರಸಿನವುಸುರಾಂಗನಾವಿಭೂಷಾಕ್ರಮದೊಳ್ ||೧೧೮|| 1
ಧರಿಸುತೆ ಜಗಮೆಲ್ಲಮನಿಡಿ ।
ಕಿರಿದ ನಿವಾರಿಪೊಡೆ ಮೋಹಮಂ ರೂಪಮಿದಂ ||
ನರಹರಿ ಮೋಹಮನೇ ದೈ ।
ತ್ಯರ ವಧುಗಳ್ಗಂತೆ ಲಕ್ಷ್ಮಿಗಂ ವಿರಚಿಸಿದಯ್ ||೧೧೯|| 2

೩೭. ವಿಷಮ

ನರಹರಿಯ ನೈಜಧವಳಿಮೆ ।
ಬರೆ ಬಿಳ್ದಿನ್ನೊಮ್ಮೆ ಕಡಲೊಳಂಕಂತೊಳೆ ಚಂ ||
ದಿರ ಧನ್ವಂತರಿಯಿಂ ಕ್ಷಯ ।
ಮಿರದಾಗಿಸದೆತ್ತಲೆತ್ತಲಿಲ್ಲದಿರಲ್ಕಿಂ ||೧೨೦|| 3

ನಿನತಿದು ಭೀಕರಸಿಂಹ ।
ಧ್ವನಿ ನೃಹರಿಯೆ ಧೈರ್ಯಯುತಸುಶಾಂತಿಯನೀಗುಂ ||
ಜನಯಿಪುದು ನಿನತುರೌದ್ರಾ ।
ನನದಿಂ ಶಾಶ್ವತದ ಸೌಮನಸ್ಯಂ ಜಗದೊಳ್ ||೧೨೧|| 4
ನರಹರಿ ನಿನ್ನಂ ಲೋಕೋ ।
ತ್ತರನೆಂದಾಶ್ರಯಿಸಲೆಮಗೆ ಭೂಕನಕಂಗಳ್ ||
ದೊರೆವುದದಿರ್ಕ್ಕೆಮ ಪುಟ್ಟಿದು ।
ದರತಿ ಸತೀಸುತಗೃಹಾದಿಸೌಖ್ಯಂಗಳೊಳಂ ||೧೨೨|| 5
ನಿಲಲೆಡೆಯಂ ಕಾಣದದೆ ।
ತ್ತಲುಮಾಶ್ರಯಿಸಲ್ಕೆ ಮೃತ್ಯುವಂ ದೈತ್ಯಗಣಂ ||
ಫಲಮೇಂ ಸಾಶ್ರಯಕೇ ಆ ।
ಯ್ತು ಲಯಭಯಂ ಮೃತ್ಯುಮೃತ್ಯು ನರಹರಿಯಿಂದಂ||೧೨೩|| 6

---

1 ವಿರುದ್ಧಕಾರ್ಯಸ್ಥಾನಗರ್ಭ. 2 ವಿರುದ್ಧಕಾರ್ಯಗರ್ಭ. 3 ಅನನುರೂಪಘಟನೆ. 4 ವಿರೂಪಕಾರ್ಯೋತ್ಪತ್ತಿಗರ್ಭ. 5 ಇಷ್ಟಾರ್ಥಯತ್ನದಿಂದ ಅನಿಷ್ಟಾವಾಪ್ತಿ. 6 ಸಾಶ್ರಯಾನರ್ಥಾವಾಪ್ತಿ.

ಸುತವಧೆಗೆ ದೈತ್ಯನಂತಿಮು |
ಸೃತಿಯೆಂದಿದರಲ್ಲಿ ತೋರದಿರ್ದೊಡೆ ಹರಿಯುಂ ||
ಖತಿಯಿಂದೆನೆ ಸದೆವೆಂ ತದ |
ವತರಿಸಿದ ನೃಹರಿಯಿನಾಯ್ತು ತನ್ನತುವಧೆ ತಾಂ ||೧೨೪|| 1
ಪಿರಿದಾಶ್ರಯಮಕ್ಕುಮೆನು |
ತ್ತಿರಗಲ್ ನೀನಜ್ಞ ದೈನ್ಯದಿಂ ನರಹರಿಯುಂ ||
ಅರಿವುದುಬಲಿಷ್ಠನಾತನೆ |
ನೆರೆಯಾಶ್ರಯಿಪಂ ನಿನತ್ತು ಸ್ಪೃತ್ಕೋಟರಮಂ ||೧೨೫||
ನಿನಗೆಮೃಗಾಂಕೋತ್ಕೃಷ್ಟಂ |
ತನುವಂ ಕುಡೆ ಮಾಯೆ ಭಸ್ಮದುದ್ಧೂಳಿತಮಿಂ ||
ತು ನೃಹರಿ ಗೆಯ್ವುಯದಂ ಚೇ |
ತನಮಂ ಸವಿಭೂತಿಗೆಯ್ವುದಾತ್ಮಗುಣಂ ತಾಂ||೧೨೬|| 3
ಶಪಿಪ ಹರಿಪದಂಸೇರೆನೆ |
ಕುಪಿತನದಾದತ್ತನುಗ್ರಹಂ ನುಡಿವುದಂ ||
ಗಪವರ್ಗದಮೆಂತಲ್ಲದೊ |
ಡುಪಲಬ್ಧಿ ಪರಾತ್ಮವಿದ್ಯೆಯಾ ನಿಯತ್ನಂ ||೧೨೭|| 4
ನಿರಿಪಲ್ಕೆ ಶ್ರದ್ಧೆಯಿಂ ನರ |
ಹರಿಯೊಳ್ಮನಮಂ ನಿಲೀನಮಾದುದದವನೊಳ್ ||
ಅರಿದರದಾ' ಕ್ಲೃಪ್ತಿಯದಾ |
ಪರಿಯೋ ಮೇಣೆಮ್ಮ ಭಾಗ್ಯಮಿಂತುಟೊ ಎನುತುಂ ||೧೨೮|| 5
ನಿನಗಾತಪತ್ರತನಾಗ |
ಲ್ಕನಂತನದು ಸಾಧ್ಯಮರಿದು ನೀನೆನೆ ಮಾಯಾ||
ತನುವಿಂದು ನೃಹರಿ ಪೆರ್ಚ್ಚುರ್ವೊ |
ಡೆ ನಂಜುಗರೆವಂ ಪಯೋಬ್ಧಿಯೊಳ್ ತಪಿಸುತವಂ||೧೨೯|| 6

1 ಪರಾನಿಷ್ಟಯತ್ನದಲ್ಲಿ ಸ್ವಾನಿಷ್ಟಾವಾಪ್ತಿ 2 ಕೇವಲಾನಿಷ್ಟಪ್ರತಿಲಂಭ. 3 ಕೇವಲೇಷ್ಟಾನವಾಪ್ತಿ. 4 ಅನಿಷ್ಟೇಷ್ಟರೂಪಾವಾಪ್ತಿ. 5 ಸರ್ವಥೈವೇಷ್ಟಾನವಾಪ್ತಿ. 6 ಕದಾಚಿದಿಷ್ಟಾವಾಪ್ತಿಪೂರ್ವಕತದನವಾಪ್ತಿ.

ನಿನತೊಂದಕ್ಷಿ ಸುಧಾಕರ ।
ನೆನುತುಂ ತನುಕಾಂತಿ ಜೊನ್ನಮೆಂದರಿದು ತನ ॥
ತ್ತು ನಿಮೀಲಿಸಿ ಕಣ್ಣಂ ಕುಡಿ ।
ವೆನೆನೆ ಚಕೋರಮಿದು ನೃಹರಿ ಬಾಯ್ದೆರೆದಿಕ್ಕುಂ ॥ ೧೩೦ ॥ 1

೩೮. ಸಮ.

ಬಿದುವನದೆಂತುಟು ಕೌ ।
ಮುದಿ ಜಾಹ್ನವಿ ಹರನನೆಂತು ಸುಭಕ್ತೇ ॥
ಷ್ಟದ ಕೀರ್ತಿ ನೃಹರಿಯಂ ಸೇ ।
ರ್ದುದು ಲೋಕೋತ್ತರದ ತಾಳ್ದುಗುಂ ಶೋಭೆಯದಂ ॥ ೧೩೧ ॥2
ಇನಶಶ್ಯಗ್ನಿಯುತಂ ಕೊಡೆ ।
ಯೆನಿಪುರಗಫಣೌಘಮಣಿವಿರಾಜಿತಮರ್ಚಿ ॥
ರ್ಜನಿತಾಭಮನುಪಮಾನಂ ।
ಕನಕಕಜೋರ್ಧ್ವಂ ನೃಹರಿಯ ವಕ್ತ್ರಂ ದ್ಯುತಿಯೊಳ್ ॥ ೧೩೨ ॥ 3
ಪರಿಚರಿಸುತರ್ಧಚಂದ್ರಿಕೆ ।
ಚಿರಮೊಲ್ದು ಪ್ರಯೋಗಮರ್ಧಚಂದ್ರದ ಲಭಿಸ ॥
ಲ್ಕಿರದಾಗಳುಂ ಸಮೋಕ್ತಿಯ ।
ಪರಿಯಾಯ್ತುವಳ್ಗಾಸೆ ನೃಹರಿ ನೋಳ್ಪುದೆ ನಾಣಂ ॥ ೧೩೩ ॥ 4

೩೯. ವಿಚಿತ್ರ.

ಪೊರೆಯಲ್ಕೆ ಪ್ರಣತಭಕ್ತನ ।
ನಿರದತಿರೌದ್ರಾವತಾರಮಂ ಗೆಯ್ದು ಮಹಾ ॥
ಸುರನಂ ಕೊಲಲಾಯುಧಮಂ ।
ನರಹರಿ ಯೊಂದುಮನದಂದು ಧರಿಸಿದುದಿಲ್ಲಂ ॥ ೧೩೪ ॥

1. ಇಷ್ಟಾನವಾಪ್ತಾವಪಿ ತದವಾಪ್ತಿ ಭ್ರಮನಿಬಂಧನಾಪೂರ್ವಕ. 2. ಅನುರೂಪವರ್ಣನ. 3. ಕಾರ್ಯಕಾರಣಸಾರೂಪ್ಯ ನಿಬಂಧನಾ. 4. ಯಾವುದಕ್ಕೆ ಪ್ರಯತ್ನವೋ ಅದು ಲಭಿಸದಂತಿರುವುದು.

### ೪೦. ಅಧಿಕ.

ಪ್ರಲಯದ ಬ್ರಹ್ಮಾಂಡಚಯಮಂ ।
ಮುಳುಂಗಿಸಲ್ಕಪ್ಪ ನಿರವಶೇಷಸ್ಥಲದಾ ॥
ಜಲಮಲ್ಪತ್ವಲ್ಪಮನೇ ।
ನೆಲೆಗೆಯ್ಗುಂ ನೃಹರಿಮಹಿಮೆ ತಿಳಿವಿಪ್ಪೆಡೆಯೊಳ್ ॥ ೧೩೫ ॥ 1
ನರಹರಿ ನಿಗುರ್ಣನೆನುತುಂ ।
ದೊರೆವಡದಂ ನೀಂ ತ್ವದಪ್ರಮೇಯಗುಣಂಗಳ್ ॥
ಅರಿಯಲ್ಬಂದಪುದೆನಿತನಿ ।
ತರೊಳಂವಾಗ್ಬ್ರಹ್ಮಮಾದೊಡನೆರೆಯವುತಾಂ ॥ ೧೩೬ ॥ 2

### ೪೧. ಅಲ್ಪ.

ಪರಮಾಣು ಸೂಕ್ಷ್ಮತಮಮೆಂ ।
ದೊರೆದಪ್ಪರ ಉಕ್ತಿ ಯಿಕ್ಕೆ ಸಾಸಿರ್ಮೆಯುಮಿ ॥
ಪಿರಿದೆನಲುಮಧುವೆ ಸಂತರ್ ।
ನರಹರಿಯ ವಿಲಾಸವಿಹೃತಿಗೆಲ್ಲಂ ಸಾಲ್ಗುಂ ॥ ೧೩೭ ॥

### ೪೨. ಅನ್ಯೋನ್ಯ.

ಇರೆ ಶ್ರದ್ಧಾಮಂತಃ ।
ಕರಣಂ ನೀರೂಪ ನೃಹರಿ ನಿನ್ನಯ ರೂಪಂ ॥
ಪರಿಭಾವಿಪ್ಪುದು ಸಾಕ್ಷಾ ।
ತ್ಕರಿಸಿಪ್ಪರ್ಯ ನೀನುಮದಕೆ ಸುತಿಪನ್ನೆವರಂ ॥ ೧೩೮ ॥

### ೪೩. ವಿಶೇಷ.

ದಿನಮಿಲ್ಲದೆಂತಿನಂ ಮ ।
ತ್ತಿನನಿಪ್ಪೊಡೆ ಶಶಿಗಮಗ್ನಿಗಂ ಕಾಂತಿಯದೆಂ ॥
ತಿನಿಬಗ್ಗಂ ರಾತ್ರಿಂದಿವ ।
ಮೆನಲೇಂ ದ್ಯುತಿ ಯಿದಕೆ ನೃಹರಿದೃಕ್ಕುಗಳೆ ಪವಣ್ ॥ ೧೩೯ ॥ 3

---

1. ಆಧಾರವೇ ದೊಡ್ಡದಾದರೂ ಆಧೇಯವೇ ದೊಡ್ಡದೆಂದು ವರ್ಣಿಸುವುದ
2. ಆಧೇಯವೇ ದೊಡ್ಡದಾದರೂ ಆಧಾರವೇ ದೊಡ್ಡದೆಂದು ವರ್ಣಿಸುವುದ
3. ಆಧಾರವಿಲ್ಲದೆ ಆಧೇಯವರ್ಣನೆ.

ಮೆರೆದಪನೊಳಗಂ ಪೊರಗಂ |
ನರಹರಿ ಯಿತ್ತಲುಮದತ್ತಲುಂ ದೆಸೆಗಳೊಳಂ ||
ತೆರೆಯಲ್ಕಂ ಕಣ್ಣಂ ಮು |
ಚ್ಚಿರೆಯುಂ ಪೋಪೆಡೆಗಳೋಳಮೆತ್ತಲುಮೆಂದುಂ || ೧೪೦ ||[1]
ನರಹರಿ ನಿನ್ನಂ ಜಾನಿಪ |
ತೆರನಂ ಕಲಿಯಲ್ಕೆ ತೊಡಗೆ ವಿದ್ಯಾನಿಚಯಂ ||
ಪರಮಾತ್ಮವಿಚಾರಂ ಯೋ |
ಗರಸಾಸ್ವಾದನಮಿವೆಲ್ಲಮುಂ ಲಭಿಸಿಕ್ಕುಂ || ೧೪೧ || [2]

## ೪೪. ವ್ಯಾಘಾತ.

ಎಣಿಕುಂ ಜನಮೆನುತೆ ಸುಲ |
ಕ್ಷಣಮಾವುದರೊಳ್ಪನಂತೆ ಕಾರ್ಷ್ಣ್ಯಂ ದುರ್ಲ |
ಕ್ಷಣಗಣಿತಂ ನೃಹರಿಯುವಂ |
ಕ್ಷಣದಾಚರಪತಿಯ ವಧೆಯನೆಸಗಿದನದರಿಂ || ೧೪೨ ||[3]
ಕರದಿಂ ರಕ್ಕಸನಂ ಸದೆ |
ದರಣ್ಯಗಂ ಮುನಿಜನಕ್ಕೆ ಕರದಿನೆ ಅಭಯಂ ||
ನೆರೆಯಿತ್ತುಜ್ಜೀವಿಪ ನರ |
ಹರಿಯನೆ ರಿಪುಹತಿಗೆ ಮಿತ್ರಜಯಕಾಂ ಸ್ತುತಿಪಂ || ೧೪೩ ||[4]
ದುರಿತದ ಯೋಗದೆ ಪುರುಷರ್ |
ಮೊರೆಯಿಡೆಯುಂ ನಿನಗೆ ಯತ್ನಿಸರ್ ಕಷ್ಟದೊಳಂ ||
ಅರಿನೇನೋಗಮುದಂ |
ವರಮಿತ್ತು ಮನಂ ವಿಕಾಸಿಸಯ್ ನೃಹರಿ ತೆರಂ || ೧೪೪ || 5

---

1. ಒಂದು ವಸ್ತುವೇ ಅನೇಕ ಸ್ಥಳದಲ್ಲಿರುವಂತೆ ವರ್ಣನೆ. 2. ಒಂದಕ್ಕಾರಂಭಿಸಿ ಅಶಕ್ಯವಾದ ವಸ್ತ್ವಂತರಕೃತಿ. 3. ಯಾವುದಕ್ಕೆ ಯಾವುದು ಸಾಧನವೋ ಅದು ತದ್ವಿರುದ್ಧಸಾಧನವಾಗುವುದು. 4. ಇದೂ ವ್ಯಾಘಾತಭೇದ. 5 ಕಾರ್ಯವಿರೋಧಿಯಾದ ಕ್ರಿಯೆಯಿದ್ದಂತೆ ಕಾಣಬರುವುದು.

### ೪೫. ಕಾರಣಮಾಲೆ.

ನರಯುತ್ನದೆ ಗುರುಲಾಭಂ |
ಗುರುಲಾಭದೆ ವಿದ್ಯೆ ವಿದ್ಯೆಯಿಂದೆ ವಿವೇಕಂ ||
ಪರತತ್ತ್ವಮದು ವಿವೇಕದೆ |
ಪರತತ್ತ್ವದಿನಪ್ಪೆ ನೃಹರಿಸಾಕ್ಷಾತ್ಕಾರಂ || ೧೪೫ || 1
ಪರಿಭವಮಕ್ಕುಮಧೈರ್ಯದೆ |
ನೆರೆದಪ್ಪುದಧೈರ್ಯಮಿರದೊಡಂತಸ್ಸತ್ತ್ವಂ ||
ಇರಲಿರ್ಕ್ಕುಂ ಸತ್ತ್ವಮದು ನೃ |
ಹರಿಕೃಪೆ ಯತ್ನಿಪುದು ನೃಹರಿಕೃಪೆಗದರಿಂದಂ || ೧೪೬ || 2

### ೪೬. ಏಕಾವಳಿ.

ನರಹರಿಯ ಮೈಮೆಯೋಜದಿ |
ನುರುತರವೋಜಮದು ಕೀಲಮಾಲಾರುಚಿಯಿಂ ||
ಪಿರಿದಾರುಚಿ ದೃಗ್ಭಾಸ್ಕರ |
ಕರದಿಂಪಿರಿದದು ತನುವ ಧವಳಿಮೆಯಿನಧಿಕಂ ||
ತನುಧವಳಿಮೆ ಗೆಲ್ದುದು ಲೋ |
ಚನಶಶಿಯನದು ಶಶಿ ನೇತ್ರದಗ್ನಿಪ್ರಭೆಯಂ ||
ತನುಗೆಯ್ದುಪುದಾಪ್ರಭೆ ಭೂ |
ವನಧಿಗತಾಖಿಲಮಣಿಪ್ರಭಾಕೋಟಿಸಮಂ || ೧೪೭ || ೧೪೮ || 3
ದಿನಮುಪ್ಪುದಾವನಿಂದಮ |
ವನಕಿರಣಂ ಸುಧೆಯುದಾವನೋಳಪ್ಪುದು ತ ||
ಜ್ಜನಿದಾತೃ ಪಿತ್ತಮಾವಂ |
ಗೆ ನೃಹರಿ ಚಕ್ಷುಸ್ತ್ರಿತಯುಮವೀಗೆಮಗೊಳ್ಪಂ || ೧೪೯ || 4

---

1. ಪ್ರಥಮ ಭೇದ. 2. ದ್ವಿತೀಯ ಭೇದ. 3. ಎರಡು ಪದ್ಯಗಳೂ ಸೇ ಒಂದು ವಾಕ್ಯ. (ಯುಗ್ಮ) 4. ಉತ್ತರೋತ್ತರಕ್ಕೆ ಪೂರ್ವಪೂರ್ವವಿಶೇಷಣಭಾ

## ೪೭. ಮಾಲಾದೀಪಕ.

ಉರುತಪ್ತಹೇಮನಿಭಕೇ |
ಸರತತಿ ಪಿಂಗಾಕ್ಷಿಯಂ ಜಯಿಸುಮದು ತದಲಂ ||
ಕರಣಮನದು ಕೌಸ್ತುಭಮಂ |
ನರಹರಿಲಾಂಛನಮನದದು ರತ್ನೌಘಮುಮಂ || ೧೫೦ ||

## ೪೮. ಸಾರ.

ಮಣಿಸಶ್ರಿಯದರಿನನಲಂ |
ಕ್ಷಣದಾಕರನವನಿನವನಿನ್ಯಮನವನಿಂ ||
ಪ್ರಣಿತಪ್ರಸನ್ನನೃಹರೀ |
ಕ್ಷಣಮದರಿನಪಾಂಗಮದರಿನಾಲಭಿಪ ಫಲಂ || ೧೫೧ || 1
ತೃಣದಿಂ ಲಘು ತೂಲಂ ಮ |
ತ್ತೃಣುವದರಿಂತಿರುಕನದರಿನಿಂತು ತನತ್ರಾ ||
ಗಣನೆಯೆನುತವಂ ನೃಹರಿಗೆ |
ಮಣಿದಿರೆ ಧೈರ್ಯದಿನದೊಂದು ತೋರದೆ ಮಾರ್ಗಂ || ೧೫೨ || 2
ಗಿರಿ ಪಿರಿದು ಶರಧಿ ಗಿರಿಯಿಂ |
ಶರಧಿಯಿನಂಬರಮದಂಬರದೆ ದೊರೆದ ಪರಾ ||
ತ್ಪರನೀನರಹರಿ ಯವನಿಂ |
ಪಿರಿದೆನುತಾಸೆಯನೆಣಿಪ್ಪರಲ್ತಿದು ಚಿತ್ರಂ || ೧೫೩ || 3

## ೪೯. ಯಥಾಸಂಖ್ಯ.

ನೃಹರಿಪ್ರಸಾದಮಹಿಮೆಯಿ |
ನಹಿತರ್ ಸುಹೃದರ್ ವಿಪತ್ತಿ ನಂಟರ್ ವಿಭವಂ ||
ಸಹಿಕೆಮನೋವ್ಯಥೆಯಿಂ ದುಃ |
ಖಿಹರಕ್ಕೆ ಶಿವಾಂತಮಕ್ಕೆ ನಲಿಗಕ್ಕಚಲಂ || ೧೫೪ ||

---

1. ಪೂರ್ವ ಪೂರ್ವಕ್ಕೆ ಉತ್ತರೋತ್ತರ ವಿಶೇಷಣ. 2. ಅಶ್ಲಾಘ್ಯಗುಣೋತ್ಕರ್ಷ. 3. ಉಭಯರೂಪ.

## ೫೦. ಪರ್ಯಾಯ.

ಮೊಗಮುಳಿಗುಂ ರೌದ್ರ್ಯಮನಂ ।
ದುಗುರ್ಗಳ್ತಳೆಗುಂ ಕರಾಳತೆಯನವು ಕಣ್ಗಳ್ ॥
ಉಗಿಗುಂ ದಾಡೆಗಳಾನ್ಗ್ಗಂ ।
ಮೃಗರಾಜಶಿರೋವತಾರದೆಯ್ದಲ್ ದೇವಂ ॥ ೧೫೫ ॥ 1
ಎಲೆ ಸುಧೆಯೆ ನಿನ್ನವಾಸ ।
ಸ್ಥಲಂಗಳಿಂತಲ್ತೆ ಜಲಧಿಯೊಳ್ ಮುಂ ಸುಮನೋ ॥
ನಿಲಯದೊಳಂದು ಬಳಿಕ್ಕಂ ।
ಕಲಾನಿಧಿಯೊಳಿಂದು ನೃಹರಿನಾಮನಿಕರದೊಳ್ ॥ ೧೫೬ ॥ 2
ಮೊದಲೋಳಿರುತಂ ಯಮಿಬೃಂ ।
ದದೊಳಸುರೋನ್ನತಿ ಜಗಮನಡರೆ ನಿಂದಿರುತುಂ ॥
ಬಿದುಮಂಡಲದೊಳ್ ನರಹರಿ ।
ವದನಮುದಂ ಸೇದ್ದುರ್ದಾಪ್ರಸನ್ನತೆ ಬಳಿಕಂ ॥ ೧೫೭ ॥ 3
ನೆಲಸಿದ್ದುರ್ಕೀಲಮಾಲಾ ।
ವಳಿಯೊಳೆ ಅವತರಿಸ ಕಾಲದೋಳದುರಾಗಂ ॥
ಜಲಜಾಲಯಾಸಮಾಗಮ ।
ವಿಲಾಸದೊಳ್ ನೃಹರಿ ಹೃದಯಮಾವರಿಕುಮುದಂ ॥ ೧೫೮ ॥ 4
ಮೊದಲೋಳಾತ್ಮೈಕ್ಯಂ ಬಳಿ ।
ಕಿದು ಪ್ರತ್ಯಗದುಪರಮೆಂಬ ನಿರ್ದೇಶಂಮ ॥
ತ್ತಿದುಶಲಂ ಸ್ವಸ್ವಾಮಿಗಳೆಂ ।
ಬುದುಭೇದಂ ನೃಹರಿ ನೂತ್ನಮಜ್ಞಾನಫಲಂ ॥ ೧೫೯ ॥ 5

---

1. ಶಾಬ್ದಪರ್ಯಾಯ 2. ಇದೂ ಶಾಬ್ದಪರ್ಯಾಯವೇ (ಇದಕ್ಕೆ ಶುದ್ಧಪರ್ಯಾಯವೆಂದೂ ಹೆಸರು) 3. ಸಂಕೋಚಪರ್ಯಾಯ. 4. ವಿಕಾಸಪರ್ಯಾಯ. 5. ಪರ್ಯಾಯದ ಮತ್ತೊಂದು ಭೇದ.

## ೫೧. ಪರಿವೃತ್ತಿ

ಎರಳ್ಮೂರು ಪೂಗಳಿಂ ನರ |
ಹರಿ ವಂಚಿತನೊಲಿದನೆನೆ ಜನಂ ಮದ್ಭಕ್ತಾಂ ||
ಘ್ರಿರಜಮುಜಪದಂ ಸಾಚ್ಛ್ವರ್ಯವೊ |
ಡರಿವಯ್ನೀನೆನತೆ ಪೂಜೆಗಿನ್ನೇನೆನುತುಂ ||೧೬೦||

## ೫೨. ಪರಿಸಂಖ್ಯೆ.

ಉರಿಯಿಂ ಸ್ನೇಹಕ್ಷಯಮೆಂ |
ದರಿಯಲ್ಬಕ್ಕರ್ಗಂ ಪ್ರದೀಪನಿವಹಂಗಳೊಳಾ ||
ನರಹರಿ ಕೀಲಾಮಾಲಾ |
ಪರೀತನಾದೊಡಮದಿಲ್ಲ ಮವನೊಳದೆಂದುಂ ||೧೬೧|| 1
ಪರದುಃಖಕ್ಷತಿಗೆಂದವ |
ತರಿಸಿಪ್ಪರ್ಗೀ ನೃಹರಿಗಾಗದಿನಿತಾನುಮಳಲ್ ||
ಇರವು ಭಯಂಕರದ ತನ |
ತ್ತಿರದಕ್ಕುಂ ಭಕ್ತರಳಲೆ ತನ್ನಳಲಧಿಕಂ ||೧೬೨|| 2

## ೫೩. ವಿಕಲ್ಪ.

ಜನಕಂ ಕೊರಸಿವಿಡಿದಿಂ |
ತು ನಿಲ್ದನಿದನರ್ಥಶಂಸಿಯುತ್ಪಾತಜಯಂ ||
ವನಜೇಕ್ಷಣನೋ ಮೃತ್ಯುವೊ |
ಕೊನೆಗಾಣಿಕುಮಳಲನೆಂದನಾಪ್ರಹ್ಲಾದಂ ||೧೬೩||

## ೫೪. ಸಮುಚ್ಚಯ.

ನೆಲಸಿರೆ ಭಕ್ತಿ ಮರುಳ್ವಿಡಿದ |
ವೊಲೆ ಚರಿಕುಂ ನೋಳ್ಕುಮಂತೆ ತಪ್ಪಳೆಯಿಡುಗುಂ ||
ನಲಿಗುಂ ನಗುಗುಂ ಪಾಡುಗು |
ಮುಲಿಗುಂ ನರ್ತಿಕ್ಕುಮೋಡುಗುಂ ನೆಗೆಗುಮವಂ ||೧೬೪|| 3

---

1 ಶಬ್ದನಿಷೇಧಗರ್ಭ. 2 ಅರ್ಥನಿಷೇಧಗರ್ಭ. 3 ಪ್ರಥಮಭೇದ.

ಅನುದಿನದ ಪೂಜೆ ಸಂಕೀ |
ರ್ತನೆ ಯಾರತಿ ಸತ್ಕಥಾಪುರಾಣಶ್ರವಣಂ ||
ವಿನುತವ್ರತೋಪವಾಸಾ |
ದಿನಿಯಮಮಿವು ಭಕ್ತಿ ಭಾಗವತನಿವನೆನ್ಗುಂ ||೧೬೫|| 1

೫೫. ಕಾರಕದೀಪಕ.

ನೆರೆಯೋದುಗುಮಾಗಮಮಂ |
ಪರಿಪರಿಯಿಂ ಪ್ರಶ್ನೆಗೆಯ್ಗುಮಾಳೋಚಿಸುಗುಂ ||
ಪರರುಪದೇಶಂ ಗ್ರಹಿಕುಂ |
ಪರಿಚರಿಕುಂ ನೃಹರಿ ತತ್ತ್ವಜಿಜ್ಞಾಸುವವಂ ||೧೬೬||

೫೬. ಸಮಾಧಿ.

ಅರಿಯದುಪಾಯಾಂತರಮಂ |
ಚರಣಂಗಳ್ಗೆರಗಿ ನೃಹರಿಯೊಲಿವುದೆನಲ್ಕೆ ||
ಯ್ದಿರೆ ದೈವಯೋಗದಿನಲಂ |
ಕರಣಂ ತದ್ಧೃದಯಹಾರಿ ಲಭಿಸಿದುದಾಗಳ್ ||೧೬೭||

೫೭. ಪ್ರತ್ಯನೀಕ.

ನೃಹರಿಪ್ರಭಾವದಿಂ ಭ |
ಕ್ತಹೃದಂತರ್ಗತದ ರಾಗಕಾಗೆ ನಿವಾಸಂ ||
ಅಹಿತೇಚ್ಛು ಬಳಸುಗುಂ ದು |
ಸ್ಸಹಕೀಲಾರೂಪದವನನದು ಕುಪಿತಂ ದಲ್ ||೧೬೮||

೫೮. ಕಾವ್ಯಾರ್ಥಾಪತ್ತಿ.

ನರಹರಿಯಂಘ್ರಿನಖಂ ಬೆಳ |
ಗಿರೆ ಸಾಸಿರ್ಮ್ಮಡಿಯಧಿಕ ಮುದಯಿಪ್ಪಿನನಿಂದಂ ||
ಒರೆವುದು ಸರೋರುಹಾದೀ |
ತರರಕ್ತದು ವಸ್ತುತತಿಯ ಪರಿಯನದಿನ್ನೇಂ ||೧೬೯||

---

1 ದ್ವಿತೀಯಭೇದ.

## ೫೯. ಕಾವ್ಯಲಿಂಗ.

ಅರಿಷಡ್ವರ್ಗಮೆ ನೀಂ ಕಾ |
ಪುರುಷಂಜನಂಗೆಲ್ಲ ದರ್ಪಮಿಕ್ಕೆಯದೆನ್ನೊಳ್ ||
ಬರಿದಾಯ್ತು ನಿನತು ಯತ್ನಂ |
ನರಹರಿಯಂತರ್ಬಹಿಸ್ಥಿತನೆನಗೆ ಜಯಿಪಂ ||೧೭೦|| 1

ಮಣಿವೆಂ ವ್ರತ ತಪಮೆ ತುಳಿಲ್ |
ಪ್ರಣತಿ ನಿರಾಹಾರ ತೀರ್ಥಯಾತ್ರೆ ನಮಿಪ್ಪೆಂ ||
ಪ್ರಣಿಧಾನತೃಪ್ತನೃಹರಿಯಿ |
ನಣಿಯಾದುದು ನಿಮ್ಮನುಳಿವ ಕೈವಲ್ಯಪಥಂ ||೧೭೧|| 2

ಮೆರೆಗುಂ ತ್ವದ್ದ್ಯುತಿ ಲೋಕೋ |
ತ್ತರಮಿಂದುವನಾಂತುದಕ್ಕಿವೋಲ್ ಸುಶ್ಲಾಘ್ಯಂ ||
ಇರದಾರುತ್ಪಥಗನಿನುಮು |
ಪುರಸ್ಕೃತನನಂಕಯುತನನೆಣಿಕುಂ ನೃಹರೀ ||೧೭೨|| 3

ನರಹರಿ ಮುಂ ನಿನಗೆ ದೃಢೀ |
ಕರಿಕುಂ ತನುವೊಮ್ಮೆಯಾನುಮೆರಗದುದನದಿಂ ||
ಡೆರಗಲ್ಮುಕ್ತನತನುವೆಂ |
ತೆರಗುವೆನಿಂ ಕ್ಷಮಿಪುದೆರಡುಮಪರಾಧಮಿವಂ ||೧೭೩|| 4

ಸಹಿಸದೆ ರಮೆಯಾ ತೀವ್ರವಿ |
ರಹಮಂ ತತ್ಸಂಗಕೆಳಸಿ ನಿಜಮಾಯಾವಿ ||
ಗ್ರಹದಿರವನಾಕೆಗರಿಪಿದ |
ನೃಹರಿಯ ಸುಖಿವಿಗಾಗೆ ಸಂಭ್ರಮೋತ್ಸಕ್ಯಂಗಳ್ ||೧೭೪|| 5

---

1 ವಾಕ್ಯಾರ್ಥಹೇತುಕ. 2 ಪದಾರ್ಥಹೇತುಕ. 3 ವಾಕ್ಯಾರ್ಥಪದಾರ್ಥಹೇತುಕ. 4 ವಾಕ್ಯಾರ್ಥೀ ಪದಾರ್ಥಹೇತುಕ. 5. ಪರಸ್ಪರವಿರುದ್ಧಯೋರುಭಯೋಃ ಕ್ರಮಾದುಭೌ ಹೇತುಭಾಸಂಭಜತಃ.

ಅನುಭವಿಸುತೆಯ್ದೆ ಪ್ರಹ್ಲಾ |
ದನ ರಕ್ಷಣಸುಖಮನಂದು ನರಹರಿ ಜಯಿಕುಂ ||
ತನತವತಾರಕ್ಲೇಶಮು |
ದನೆಸಗಿದಂ ಸಫಲಮಂ ವಿಫಲಮುಮನಾತಂ ||೧೭೫|| 1

ಕಡಿಯುತೆ ಜೀವನ್ಮುಕ್ತತೆ |
ಗಡರಲವಂ ಭ್ರಮಿಕುಮುವಶಮಾಮುನಮೊಡನು ||
ಯ್ದೊಡೆ ನೀಂ ಸುಮನ ನೃಹರಿದೃ
ಕ್ಕೆಡೆಯಿಂದುವೊಳ್ಳೈಕ್ಯಮಕ್ಕುಮಾಯೆಡೆ ಯುಕ್ತಂ ||೧೭೬|| 2

## ೬೦. ಅರ್ಥಾಂತರನ್ಯಾಸ.

ಗರಳಂ ಪನ್ನಗಮುಗ್ನಿ |
ದ್ವಿರದಂ ಪ್ರಾಸಾದಪಾತನಂ ಮಲ್ಲರ್ ಸಂ ||
ಹರಿಸಲ್ ಪ್ರಹ್ಲಾದನನಾ |
ರರದೇವುದು ಮಿಳ್ತು ನೃಹರಿ ರಕ್ಷಿಸಲನಿಶಂ ||೧೭೭|| 3

ದೊರೆಯಲ್ ಗುಣಿಜನಸಂಗಂ |
ಮೆರೆದಪ್ಪಂ ಕ್ಷುದ್ರನುಂ ಮಹೋನ್ನತರವೊಲೇ ||
ಬೆರೆದಿರೆ ಸುಮತತಿಯೊಳ್ ನರ |
ಹರಿಕಂಠಕೆ ಮಾಲೆಯುಪ್ಪುದಾಸೂತ್ರಗಣಂ ||೧೭೮|| 4

ಮುನಿಮಾಂಸಜೀರ್ಣಯೋಗಂ |
ದನುಜಬಲಾಕ್ಕರಣಮೆಂಬವೊಲ್ ಕರುಳಂ ಗ ||
ಣ್ಯನೆ ಅಕೃತಾಗಂ ಕ್ಷುದ್ರನು |
ಮೆನುತೊಪ್ಪುವ ಸುಧಿಯವೊಲ್ ನೃಹರಿ ಗಳಕಾಂತಂ ||೧೭೯|| 5

---

1 ಮತ್ತೊಂದು ಭೇದ. 2 ಇದು ಜಯದೇವಮತದಲ್ಲಿ ಹೇತ್ವಲಂಕಾ ಕುವಲಯಾನಂದಮತದಲ್ಲಿ ಕಾವ್ಯಲಿಂಗ. 3 ವಿಶೇಷವು ಪ್ರಸ್ತುತವಾಗಲು ಸ್ತುತವಾದ ಸಾಮಾನ್ಯದ ನ್ಯಾಸ. 4 ಸಾಮಾನ್ಯವು ಅಪ್ರಸ್ತುತವಾಗಲು ಅಪ್ರ ತವಾದ ವಿಶೇಷದ ನ್ಯಾಸ. 5 ಅಪ್ರಕೃತದಿಂದ ಪ್ರಕೃತಸಮರ್ಥನ.

ನೆಲಸೆ ವರಭಕ್ತಿ ಹೃದಯದೊ |
ಳೊಲಿಗುಂ ಕುಲಜಾತಿಗಣಿಸದಾ ನೃಹರಿಯಿದಾ ||
ಅಲಘೂಕ್ತಿದಿಟಂ ಮುನಿಸಂ |
ಕುಲಕಂ ಪ್ರಹ್ಲಾದಚರಿತಮುಪದೇಶಕರಂ ||೧೮೦|| 1

## ೬೧. ವಿಕಸ್ವರ.

ಎನಿತಾನುಂ ಹಿಂಸಿಸೆಯುಂ |
ಜನಿಸದು ಭಯಮಿನಿತದಾದೊಡಂ ಪ್ರಹ್ಲಾದಂ ||
ಗೆ ನಿಜಹೃದಯದೊಳ್ ತಾಳ್ದಿರು |
ತೆ ನೃಹರಿಯಂ ಸಂತರಜಲದುರ್ಧರ್ಷರವರ್ ||೧೮೧|| 2

ಹನುಜತ್ವಂ ಪ್ರಹ್ಲಾದಂ |
ಗನಂತಗುಣನಿಧಿಗೆ ನೃಹರಿಭಕ್ತಂಗೆಂದುಂ ||
ಅನಿಕೃಷ್ಟಕರಂ ಮಲಿನತೆ |
ಯೆನಸುಂ ಮೃಗಮದಗುಣೌಘದೊಳ್ ಮಜ್ಜಿಪವೊಲ್ ||೧೮೨|| 3

ಅಳಿನುಡಿಯಂ ಧೂರ್ತ ನಿನತ |
ನುಳಿದು ನೃಹರಿಗೇಹದೊಳಿರ ಭಕ್ತಂ ತಿಳಿವಂ ||
ಸ್ಥಳಮದು ಗಣ್ಯತೆಯಿಂಗುಂ |
ತಿಳಿಗುಂ ಮಣಿಮಾಲೆಸೇರ್ದ್ದ ಕಾಚಮನಂತಾರ್ ||೧೮೩|| 4

ದಿನಪಾಗ್ನಿಗಳುರಿಯೋಜಮ |
ವೆನಿಕುಂ ಮಾಲೆ ನೃಹರಿಗೆ ಪ್ರತಾಪಾರ್ಚಿಗಳಿಂ ||
ತು ನವಂ ಗುಣತ್ವಮೆಡೆಯಿಂ |
ಜನಕೆ ಗುಣಾಗುಣದ ತತ್ತ್ವಮುಂ ಭಾವನೆಯಿಂ ||೧೮೪|| 5

## ೬೨. ಪ್ರೌಢೋಕ್ತಿ

ನರಹರಿಯಂಘ್ರಿ ನಖಂಗಳ್ |

1 ಪ್ರಕೃತದಿಂದ ಅಪ್ರಕೃತ ಸಮರ್ಥನ. 2 ಸಾಮಾನ್ಯೋದಾಹರಣೆ. 3 ಉಪಮಾನರೀತಿ. 4 ಅರ್ಥಾಂತರನ್ಯಾಸರೀತಿ. 5 ಇದು ಮತ್ತೊಂದು ಭೇದ,

ಮೆರೆದವುವೌನ್ಪೋಪಕಂಠದಾ ಪವಳಂಬೊಲ್ ||
ವರದಂಷ್ಟ್ರಂ ಹಿಮವದ್ಗತ |
ಸುರತಟಿನೀತೀರವಂಶಮೌಕ್ತಿಕಮಿದೆನಲ್ ||೧೮೫||

### ೬೩. ಸಂಭಾವನೆ.

ಬರೆಯಲ್ ಬರ್ಪೊಡೆ ಶೇಷಂ |
ನರಹರಿಗುಣದಲ್ಪಮೆನಿಸಿದಪ್ಪುದು ಕಥಿತಂ ||
ಬರೆಯಲ್ ಬರ್ಪೊಡೆ ಲಿಖಿತಂ |
ತರಣಿಯುದೆಯ್ದುವೊಡೆ ನೋಡಲಿಂದ್ರಂ ದೃಷ್ಟಂ ||೧೮೬||

### ೬೪. ಮಿಥ್ಯಾಧ್ಯವಸ್ಥಿತಿ.

ನರಹರಿಯುನುಳಿದು ಸಿರಿಯಿಂ |
ಸ್ಥಿರದೈಸಿರಿಗೆಳಸಲಭ್ರ ಪುಷ್ಪಂ ಬೆಳ್ಕ ||
ತ್ತುರಿ ಪುಲಿನತೈಲದೀಪಂ |
ಮರುಫಲವಿಹಗಪಯುಮಿವರಿನರ್ಚಿಸಿ ಪಡೆಗುಂ ||೧೮೭|| 1

ಮನಕಪರಿಪಕ್ತಿದಶೆಯೆಂ |
ದೆನಿಸೆ ನೃಹರಿತತ್ತ್ವದರಿವು ಜನಿಕುಂ ವಂಧ್ಯಾ ||
ತನುಜಾತಂಗಷ್ಟಮರಾ |
ಗನಿಬದ್ಧಂ ದಶಮರಸದಗಾನಂ ಪಾಡಲ್ ||೧೮೮||2

### ೬೫. ಲಲಿತ.

ಅಗಣಿಸಿ ಸಂತೋಷಾರ್ಥಿ ಬ |
ಳಗೆಯ್ದಿದನೆನ್ಯಹರಿಯೆನದದೋಸರಿಸವನಂ ||
ಮಿಗೆ ತತ್ಸಾಕ್ಷಾತ್ಕಾರಕೆ |
ಬಗೆವಂ ನೀಂ ಪರಿಪು ಬಳಕೆ ಕಾಲ್ಗಳನಗುವಂ ||೧೮೯|| 3
ಅಳವಿಲ್ಲದನೃಹರಿಗುಣಂ |
ಗಳೆತ್ತಲಾಸ್ತವಕೆ ಕಿರಿದು ಮನ್ಮತಿಯೆತ್ತಲ್ ||

---

1 ನಿದರ್ಶನಗರ್ಭ. 2 ಶುದ್ಧಭೇದ, 3 ಪ್ರಥಮಭೇದ,

ಅಳಿವುಲ್ಲಿನಿಂದಜಾಂಡಂ |
ಗಳೆನಪರಿಮಿತದ ಸೃಜಿಪ್ಪಮೋಹದೆ ಚರಿಪೆಂ ||೧೯೦|| 1

ನರಹರಿಯೆನ್ನೀಹೃದಯಕೆ !
ವಿರಚಿಸದಿರದಾತ್ಮಕನಕಕೋಶದ ದಶೆಯಂ ||
ಅರಿದುಂ ತ್ವದುದಾಸೀನತೆ |
ಯಿರವಂ ಪ್ರಕೃತಿವಶನೊಂದಿದಂ ಯಾಚಿಪೆನಾಂ ||೧೯೧|| 2

## ೬೬. ಪ್ರಹರ್ಷಣ.

ಇರದಂತಂತರ್ಹಿತನೆಂ |
ದರಿಯದೆ ತದ್ದರ್ಶನಕ್ಕವಳ್ ಕಾಂಕ್ಷಿಸೆ ನಿ ||
ರ್ಜರರಾಗೆ ನೃಹರಿ ಸೌಮ್ಯಂ |
ಸಿರಿಯೆ ಉಸಾಯಂಗಡೆನುತೆ ಸಾರ್ಚ್ಚಲ್ ಬಂದರ್ ||೧೯೨|| 3

ಜನಕಂಗೆ ಬೆರ್ಚ್ಚಿ ಯಾಚಿಸೆ |
ತನಗಾಪ್ರಹ್ಲಾದನಭಯಮಂ ನೃಹರಿಯವಂ ||
ತನುಗೊಂಡು ಜಗತ್ರಯಸ |
ಜ್ಜನದ ಮನೋಭಯಮನೆಲ್ಲಮಂ ಶಮಯಿಸಿದಂ ||೧೯೩|| 4

ನರಹರಿ ನಿನ್ನ ಧ್ಯಾನದೆ |
ಕರಗತವೆನೆ ಸಿದ್ಧಿಗಳ್ ಧನಾಂಜನಮೂಲಂ ||
ದೊರೆಕೊಳೆ ಯತ್ನಿವೊಡತ್ತಲೆ |
ವರನಿಧಿಲಾಭಂ ಗಡಪ್ಪುದೊಂದಚ್ಚರಿಯೇ ||೧೯೪|| 5

## ೬೭. ವಿಷಾದನ.

ಪರಪಿನ್ಯಸ್ತಕಳತ್ರಂ |
ಪರಸದ್ಮಗತಂ ಪರಾನ್ನವಸ್ತ್ರಂ ರುಗ್ಣಂ ||
ನರಹರಿ ನೀನೇ ಗತಿಯೆಂ |
ದಿರೆ ನೀನು ಮನಾದರಿಪ್ಪುದುವನ ಕುಭಾಗ್ಯಂ ||೧೯೫||

1 ದ್ವಿತೀಯಭೇದ. 2 ಮತ್ತೊಂದು ಭೇದ. 3 ಪ್ರಥಮಭೇದ. 4 ದ್ವಿತೀಯಭೇದ. 5 ತೃತೀಯಭೇದ.

## ೬೮. ಉಲ್ಲಾಸ.

ನಿಸತು ಗುಣಾರ್ಣವಕಣಿಕಾ |
ಮನನದೆ ಮನವಾಯ್ತು ನೃಹರಿ ಧನ್ಯಮದುಳಿದೀ ||
ತನು ಭೂಮಿಭಾರಮಧಿಕಮ |
ದಿನಿತಾನುಂ ತ್ವತ್ಸಪರ್ಯೆಯೆಸಗದೆ ನಿಸದಂ ||೧೯೬|| 1

ಅವತರಿಸೆ ನೃಹರಿ ಪರಿದಸು |
ರವನಿತೆಯರ್ ಕಾಣದೆಡೆಯುನಿಂತು ಕನಲ್ಗುಂ ||
ಅವಹೇಳನಕೀವಿಕೃತತೆ |
ಜವಕುಂಠನಕೀಘನಸ್ತನೋದರಜಘನಂ ||೧೯೭|| 2

ಸರಸಿಜ ನೃಹರಿಶಿರೋಲಂ |
ಕರಣಕ್ಕೆಳಸಲ್ ಮದೇಭವಾದಾಹತಿಯಾ ||
ಯ್ತಿರದೆಂದು ಕೆಂದಿದಪಯೇಂ |
ದುರದೃಷ್ಟಮಸಾಧ್ಯದೂರದೊಳ್ ತ್ವಜ್ಜನನಂ ||೧೯೮|| 3

ನೃಪಸೇವಾಭಾಗ್ಯಂ ಬಯ |
ಸಿ ಪರೀಕ್ಷಾಯಾಸದಸಹವಾನತೆಯಿಂ ಪೋ ||
ದಪರೆ ನೃಹರಿಯಂ ಭಜಿಸಿಂ |
ವಿಪರೀತಂ ಬಾರದಿರ್ದೊಡಾಸ್ಥಿತಿ ಭಾಗ್ಯಂ ||೧೯೯|| 4

## ೬೯. ಅವಜ್ಞೆ.

ಎನಿತುಂ ಸರಣೆಂದೆರೆದೊಡ |
ಮಿನಿತುಮನೀಯಂ ಕನಲ್ವುದಾನೃಹರಿಗೆನು ||
ತ್ತನುಚಿತಮದು ದೋಷಂ ಬೇ |
ಳ್ಪನಯೇ ಕಲ್ ನೀರನೀಂಟುಗುಂ ಕಡಲೊಳಮೇಂ ||೨೦೦|| 5

1 ಪ್ರಥಮಭೇದ. 2 ದ್ವಿತೀಯಭೇದ. 3 ತೃತೀಯಭೇದ. 4 ಚತುರ್ಥಭೇದ. 5 ಪ್ರಥಮಭೇದ.

ದನುಜಶಿಶುಗೆ ನೃಹರಿಯೊಸಯೆ |
ಮುನಿಜನಕೇಂ ಲಘುತೆ ಚಕ್ರಕೇಂ ಕೊಲಲುಗುರಿಂ||
ವನಮಾಲೆಗಾಂತೊಡೆ ಕರುಳ್ಗ |
ಳನದೇಂ ಮಣಿಪೀಠಕೇನಿರಲ್ ದೇಹಳಿಯೊಳ್ ||೨೦೧|| 1

## ೨೦. ಅನುಜ್ಞೆ.

ಕರುಣಾಶಾಲಿಯೆ ನರಹರಿ |
ಬರಲಿಪ್ಪೊಡೆ ದೇಹಮೆನಗದಿನ್ನುಂ ತ್ವದಲಂ ||
ಕರಣಕ್ಷಮಮೋಮೇಣಸು |
ಚರಕ್ಷಮಮೊ ಅಕ್ಕೆ ನಾಗಮೊ ಪಿಶಾಚಮೊ ತಾಂ ||೨೦೨||

## ೨೧. ಲೇಶ.

ಎರೆಯುತೆನಾಣ್ಬದೆ ಛಿದ್ರಮ |
ನರಿಪಲ್ ಸದಸದನ ಭಿಜ್ಞರಪ್ಪರೆ ಧನ್ಯರ್ ||
ಗುರುತೆಗೆ ಬಳಲ್ದು ಧರ್ಮಂ |
ಚರಿಪ ವಿವೇಕಿಗಳ ನೃಹರಿಯಂದಪನಳಲಂ ||೨೦೩||

## ೨೨ ಮುದ್ರೆ.

ವಿಷಮುಜಮಾಗದು ಕಂಡಂ |
ಗುಶಸನೊರೆದನಿಂತು ಮಂತ್ರಮಾತ್ರಾವೃತ್ತಂ ||
ಪಸರಿಕೆ ಬಲಿಯೆನುತಂ ತಂ|
ದೆಸಗಿದಳಾ ಅಸುರಿ ನೃಹರಿ ಭಕ್ತವ್ಯಥೆಯೊಳ್ ||೨೦೪||

## ೨೩. ರತ್ನಾವಳಿ.

ಸುಗುಣಗಣಧಾತ್ರಿರಾಗಾ |
ದಿಗದಾಮೃತಮಿಷ್ಟಹತಿಧನಂಜಯನೇನೋ ||
ವಿಗತಿಜಗತ್ಪ್ರಾಣಂ ಪ್ರ |
ತ್ಯಗನಂತಂ ನೃಹರಿಮೂರ್ತಿಯಕ್ಕೆಮ ಜಯದಂ ||೨೦೫|| 2

---

1 ದ್ವಿತೀಯಭೇದ. 2 ಪ್ರಸಿದ್ಧಕ್ರಮಾನುಸರಣ.

ಅನುಭೂತರಸಾಲಿಂಗನ |
ಮನಿಯಂತ್ರಿತಮಾನಗತಿ ಕಠಿನಸ್ಪೃಷ್ಟಧೃತಾ ||
ವನಿಭೃತ್ಕರ್ಷಣಮಿವು ಮು |
ನ್ನಿನ ನಿನ್ನ ಚರಿತ್ರ ನೃಹರಿ ಗೆಲವೀಗೆಮಗಂ ||೨೦೬|| 1

### ೭೪ ತದ್ಗುಣ.

ಮನಕಳದೆ ರೂಪಂ ಯದ್ಭಾ |
ವನೆಯೆಂದಪರುಕ್ತಿ ನನ್ನಿಯಲ್ಲದೊಡಿಂತೇಂ ||
ತನತು ವಿನಾಶಂ ತಿಳಿದು ನೃ |
ಜನಮೋಡುಗುವೀಕ್ಷಿಸೆನ್ನ ಮನಮಂ ನೃಹರೀ ||೨೦೭||

### ೭೫ ಪೂರ್ವರೂಪ.

ಮನಮಿದು ದಾರಾದಿಗಳೊ |
ಳನುರಾಗದೆ ರಕ್ತಮೆನಸಿರಲ್ಕಂ ನಿನತೀ ||
ತನುರುಚಿಯಿಂ ಮತ್ತೆ ಧವಳ |
ಮೆನಿಕುಂ ನೃಹರಿ ತನತಾದಿಸತ್ವದ ತೆರದಿಂ ||೨೦೮|| 2
ಜಗಮಿದು ರಿಕ್ತತೆಯಿಂ ಸಾ |
ಜಗರಕ್ರವ್ಯಾದವಿಪಿನರೂಪದಿನಿರೆಯುಂ ||
ನಿಗಮನುತಂ ತಣಿವಂ ನೀ |
ಳ್ಕುಗುಮಾಯುವನೊಂದೆ ನೃಹರಿನಾಮಮದೆನಸುಂ ||೨೦೯|| 3

### ೭೬ ಅತದ್ಗುಣ.

ನರಹರಿಯೆ ಕೀಲಮಾಲತಿ |
ಪರಿವೃತರೌದ್ರಾನನಂ ನಿನತ್ತೆನಿಸಿರೆಯುಂ ||
ಮೆರೆಗುಂ ಮನಕಾಪ್ಯಾಯನ |
ಕರಮೆನುತುಮಸಿತ್ತು ನಿಹತಮದೆನಿತ್ತದರೊಳ್ ||೨೧೦||

---

1 ಪ್ರಸಿದ್ಧಕ್ರಮಾನನುಸರಣ. 2 ಪ್ರಥಮಭೇದ. 3 ದ್ವಿತೀಯಭೇದ.

೭೭ ಅನುಗುಣೆ

ಸಹಜಂ ಸಾತ್ವಿಕಭಾವಂ |
ಮಹಿತಸುಧೀಸಂಗಮುಜ್ಜ್ವಲಂ ನಿಜಚರಿತಂ ||
ನೃಹರಿಗುಣಪ್ರಕರೋತ್ಕ |
ಷ್ಟಹೃದಯಮಿಸಿತುಮಿರೆ ನರನ ಭಾಗ್ಯಕ್ಕೆಣೆಯೇಂ ||೨೧೧||

೭೮ ಮಿಾಲಿತ.

ಸರಮದು ಮಲ್ಲಿಗೆಬೆಳ್ದಾ |
ವರೆವೂಗಳ ಪೂಜೆಗೆಯ್ದ ಸಿರಿಕಂಡಂ ಕ |
ರ್ಪೂರವುಡಿ ಸೂಸಿದ ಕಾಣವು |
ನರಹರಿಯಾ ನೈಜಧವಳಮೂರ್ತಿಯೊಳಾಗ್ಗಂ ||೨೧೨||

೭೯ ಸಾಮಾನ್ಯ.

ದಶದಿಶೆಗಾಗಸದೊಳ್ ಸ |
ತ್ವಿಪಾಸ್ಫುಲಿಂಗತತಿ ನೃಹರಿಕೀಲಾವಳಿಯಂ ||
ಪಸರಿಸಿಸಿಡಿದಂದಾ ಅನಿ |
ಮಿಷರ್ಗಂ ತನ್ಮಧ್ಯದಲ್ಲಿ ಕಾಣದು ಭಜಿಯಂ ||೨೧೩||

೮೦ ಉನ್ಮೀಲಿತ.

ನರಹರಿಯ ಮೂರ್ತಿಧವಳಿಮೆ |
ಹರಿಣಚ್ಛವಿಯಂ ತ್ರಿಲೋಕಕಿತ್ತಿರೆ ದಿವಿಜರ್ ||
ಅರಿಗುಂ ಶೀತದಿನಿದು ಹಿಮ |
ಗಿರಿಯೆನುತಿಂಗಡಲಿದೆನುಖುಮಾಸ್ಪರ್ಶದಿನುಂ ||೨೧೪||

೮೧ ವಿಶೇಷ.

ಅಸುರಪಲಾಯನೆರಂಹ |
ಶ್ಚ್ವಸನಂ ತೀಡುವೊಡೆ ನೃಹರಿಕೀಲಾವಳಿಯಿಂ ||
ಪಸರಿಪ ಕಣಂಗಳಿವೆ ಮ |
ತ್ತೆಸೆವುಡುಗಳಿವೆನುತೆ ಲಕ್ಷಿತಂಗಳೆನಿಕ್ಕುಂ ||೧೧೫||

### ೮೨ ಗೂಢೋತ್ತರ

ಇದಱಲಿನಿತಾನುಮಿಱಿದು ನಾ |
ಗರಿಕಕ್ಷಮಪಟುತೆ ಯುವನೆ ಆಶ್ರಮಮಿದರೊಳ್ ||
ಹರಿಸಂಕೀರ್ಣಮದರಿಯು |
ತ್ತಿರೆ ನೀನಿಟ್ಟಿಪೊಡೆ ನಿನಗೆ ಸತ್ಕೃತಿ ಲಭಿಕುಂ ||೨೧೬|| 1
ಸುರತತಿಗೆ ಸೊಗವು ಇಕ್ಕುರ್ಗಂ |
ಹರಣಂ ಸೊಗಮುಂ ಪ್ರಶ್ನಿಪ್ಪನಿಕ್ಕುರ್ಗಂ ಹರಣಂ ||
ಒರೆದೆನೆನ ತದುವೆ ಮುತ್ತು |
ತ್ತರಮೆಂತೆಂರೆನೇನಮರ್ತ್ಯರಳಿದಪರೆನುತುಂ ||೨೧೭|| 2

### ೮೩ ಚಿತ್ರೋತ್ತರ.

ನರಹರಿಗಾರತಿನಿರತರ್ |
ಚರಿಪರದಾರ್ಜವದವನೊಸೆವಂತೆವ್ರೊಲಾವಂ ||
ತೊರೆಯಂ ಮನದಿಂದವನಂ |
ಹರಣಮನೇಂ ಕಷ್ಟದೊಳಮುಳಿಪ್ಪುದು ಭಕ್ತಂ ||೨೧೮||

### ೮೪ ಸೂಕ್ಷ್ಮ.

ತಿಳಿದೆನ್ನ ಮನೋಗತಮುಂ |
ಬಳಸಿದಾರ್ದ್ರಶ್ಚರ್ಯ ದೃಶದನೀಕ್ಷಿಸಿ ತನತಂ ||
ಗುಳಿಯಿಂದೆನಗೆ ನಿಜೋದರ |
ತಳಮಂ ತೋರ್ದ್ದನುಪದೇಷ್ಟೃ ಶಿಷ್ಯಗುಣಜ್ಞಂ ||೨೧೯||

### ೮೫ ಪಿಹಿತ.

ಅವತರಿಸೆ ನೃಹರಿ ರಿಪಿ ಜಲ |
ಲವಯೂಚಕಪಥಿಕಪಿದಕಾಕಾವ್ಯಾದಿಗಳಂ ||
ಎವೆಯಿಕ್ಕದೀಕ್ಷಿಸಿತ್ತಂ |
ಸವಿನೀರನರಣ್ಯಧಾನ್ಯದನ್ನೋತ್ತರಮುಂ ||೨೨೦||

### ೮೬ ವ್ಯಾಜೋಕ್ತಿ.

ನರಹರಿಯವತಾರಂ ಕೇ |

1 ಉನ್ನೇಯಪ್ರಶ್ನಕ್ಕೆ ಉತ್ತರ. 2 ನಿಬದ್ಧಪ್ರಶ್ನೋತ್ತರ.

ಳ್ದರದೊಳಡುತೆ ಭಿನ್ನಭಿನ್ನಸಾಸ್ವತ್ತಸು ಸೇ ||
ದ್ದುರ್ ರಸಾತಲಮಂ ನಿಜವಧು |
ಗೊರ್ದೆದನಸುರನೊವ್ವರ್ನಾಪಿಸುಂಸಂತೆನುತಂ ||೨೨೧||

೬೭ ಗೂಢೋಕ್ತಿ.

ಉಳಿವುದು ವಸಂತಲಕ್ಷ್ಮಿಯೆ |
ವಿಲಾಸಮಂ ನಿನ್ನಂ ಕಾಮುಚರಿತಕ್ಷಮುಕಾ ||
ಲಲಯಮುಪಸ್ಥಿತಮಿಂ ಸಲೆ |
ಬಳೆದಪ್ಪುದಾತಪಮುಸ್ಸೌಮ್ಯದುಷ್ಣಂ ಬಕ್ಕುರ್ಂ ||೨೨೨||

೬೮ ವಿವೃತೋಕ್ತಿ.

ಉಳಿವುದು ವಸಂತಲಕ್ಷ್ಮಿಯೆ |
ವಿಲಾಸಮಂ ನಿನ್ನ ಕಾಮುಚರಿತಕ್ಷಮುಕಾ ||
ಲಲಯಮುಪಸ್ಥಿತಮಿಂ ಸಲೆ |
ಬಳೆದಪ್ಪುದಾತಪಮೆನುತ್ತೆ ಸೂಚನೆಯೀಗಂ ||೨೨೩|| 1
ಎಲೆದೇವ ಗುಣಾಕೃಷ್ಟಂ |
ಚಲಿತನೆನೋವದಿರೆ ಪತಿತಪಾವನ ವಿಷಮ ||
ಸ್ಥಲದಿಂ ನೀನಾಗಳ್ತಿಯಿಂ |
ತೊಲಗೆ ಪ್ರಹ್ಲಾದನುಕ್ತಿ ನೃಹರಿಸಲೇಶಂ ||೨೨೪|| 2
ದೊರೆದುದೆ ತಣೆವೀಸ್ತುತಿಯಿಂ |
ದುರುಳರಿವಂ ದೃಢತೆಯೆನ್ನ ಪುಸಿಯೆಂದಪರಿಂ ||
ವಿರಮಿಪೆನೆನೆ ಪ್ರಹ್ಲಾದಂ |
ಬರುತಚ್ಚರಿಗೆಯ್ದು ನೃಹರಿ ಗೆಲಪೀಗೆಮಗಂ ||೨೨೫|| 3
ಸಕಲಂ ನೀನೆನುತೆಲ್ಲವು |
ಸುಗಿದೇನುಪಭೋಗ್ಯವಾಯ್ತು ವಿರಸಂ ನಿನತಾ ||
ಸುಖದೇಕ್ಷಣಮಿಲ್ಲದೆ ಜಗ |
ಕೆ ಘನಾಂಧನೆನಿಪ್ಪೆನೆಂದನಾ ಪ್ರಹ್ಲಾದಂ ||೨೨೬|| 4

---

1 ಪರವಂಚನ ಗುಪ್ತಾವಿಷ್ಕರಣ. 2 ತ್ರಪಾಗುಪ್ತಾವಿಷ್ಕರಣ.
3 ಅರ್ಥಶಕ್ತಿಮೂಲಗುಪ್ತಾರ್ಥಾವಿಷ್ಕರಣ. 4 ಕವಿಗುಪ್ತಾವಿಷ್ಕರಣ.

೭೯ ಯುಕ್ತಿ.

ತರಳಂ ಜಲ್ಪಿಸುತಿರೆ ತ |
ನ್ನೊರೆದಾಕರ್ಣಿಸಿದ ಮಂತ್ರಮುಂ ವಾಕ್ಯಂ ಬೆ ||
ಚ್ಚಿರ್ ರಹಸ್ಯಂ ಕಾಪಿಡೆ ಪ |
ಣ್ಣಿರದಿತ್ತನಿತರೊಳೆ ನೃಹರಿಭಕ್ತಂ ತಡೆಗುಂ ||೨೨೭||

೯೦ ಲೋಕೋಕ್ತಿ.

ಇರದಿದು ಕಷ್ಟಂ ಶಾಶ್ವತ |
ಮರಿ ನೀಂ ಕಾರ್ಯಾರ್ಥಿಕತ್ತೆ ಯಡಿಗೆರಗಿದಪಂ ||
ನರಹರಿಯುಂ ನಂಬುತೆ ಮು |
ಚ್ಚಿರೆ ಕಣ್ಗಳ್ ಸೈಸವೇಳ್ಕುಮಲ್ಪಂ ಕಾಲಂ ||೨೨೮||

೯೧ ಛೇಕೋಕ್ತಿ.

ನರಹರಿಯವತರಿಸೆ ಬಲಂ |
ಪರಿದುದಡಂಗಿದುದು ಬೀರಮಳಿದುದು ಧೈರ್ಯಂ ||
ಸುರರೆಂದರ್ಪಿಪರಸುರರ್ |
ಸಿರಿಯುಂ ಬಂದಂಗೆ ಮಡಿವನೀಕ್ಷಿಪನೆ ಜವಂ ||೨೨೯||

೯೨ ವಕ್ರೋಕ್ತಿ.

ವಿಪರೀತಬುದ್ಧಿಯಿದನೇಂ |
ಸುಪಯೋಧರೆ ನಿನಗೆ ನೃಹರಿಯಿತ್ತನದೆನ್ನೊಳ್ ||
ವಿಪರೀತಾದಿಗಳೆಂತು ಕು |
ಲಪತ್ನಿಗೆ ತಿಳಿದಪುವರಿಯುವಂ ವೇಶ್ಯೆಯರೊಳ್ ||೨೩೦|| 1
ತರಳನೆ ಅಸುರರ್ ಸ್ಥಿರರಿಂ |
ಹರಿಯುರಿ ಯಸಮರ್ಥನಮರರಂ ಕಾವೊಡವಂ ||
ನರಗೇನೆ ವಿಪದಂ ಸಿದ್ಧಂ |
ಕಿರಿದುಮೃತಮುಮಕ್ಕೆ ಪಂಚನಾಕ್ಷರಮುಳೆ ನೀಂ ||೨೩೧|| 2
ಜಲಶೀರ್ಷನೆತ್ತಲರಿಗುಂ |

1 ಶಬ್ದಶ್ಲೇಷಮೂಲ—ಅವಿಕೃತ 2. ಶಬ್ಧಶ್ಲೇಷಮೂಲ-ವಿಕೃತ.

ಜಲಾಶನಂ ಗಿರಿಯುದೆತ್ತಲಾವನೊ ಬೆನ್ನೊಳ್ ||
ತಳೆದಂ ಶಬರನೊ ದಂಷ್ಟ್ರಿಯೆ |
ತಿಳಿಗುಂ ಘೋರನೊ ಮೃಗೇಂದ್ರವಕ್ತ್ರನೆ ಬಲ್ಲಂ ||೨೩೨|| 1
ಪತಿಯೆನಲಕಾರಣಂ ತ್ವ |
ತ್ಪ್ರತಿಘಂ ಬಿಡಯುಕ್ತಮಿದಿದಯುಕ್ತಮೆಯೆನೆ ||
ನ್ನುತೆ ಮಾಲೆಯಿಂದ ಪೊಡೆದಳ್ |
ಸತಿ ಶಾಂತತೆಯೀಗೆ ನೃಹರಿ ಪೆಣ್ಗಳ್ಗನಿಶಂ||೨೩೩|| 2

೯೨ ಸ್ವಭಾವೋಕ್ತಿ.

ತನುಸುಸ್ತಬ್ಧಮೆನಲ್ಕಾ ||
ದನುಜನನೀಕ್ಷಿಸುತೆ ನಟ್ಟದಿಟ್ಟಿಯಿನಾಗಳ್ ||
ತನತಂಕದೆ ತಾಳ್ದಿತುಡುಕು |
ತೆ ನೃಹರಿ ಕಿಳ್ಬೊಡೆವಿದಾರಿಪಂ ಕುಡುಗೊಳ್ಪಂ ||೨೩೪||

೯೩ ಭಾವಿಕ.

ಎನಗಿನ್ನುಂ ಪ್ರತ್ಯಕ್ಷಂ |
ದನುಜರಿನಾಬಾಲಹಿಂಸೆ ಮಡಿಪುಕ್ಕಿ ಸರಣ್ ||
ಎನುತವನ ಸ್ತುತಿ ಭೀಕರ |
ತನುವಿಂ ನೃಹರಿಯುವತಾರವೆಲ್ಲಂ ಕಾಣ್ಗುಂ ||೨೩೫||

೯೪ ಉದಾತ್ತ.

ಇದು ಭಕ್ತಂ ಪ್ರಹ್ಲಾದಂ |
ನೊದಲೊಳ್ ಜನಿಗೊಂಡ ಸರವಭಿನ್ನಾಯಸ್ತಂ ||
ಭದಸುರಶಾಖಿಸುಮಾಸಾ |
ರದ ಲಕ್ಷ್ಮೀ ನೃಹರಿಶುಭಸಮಾಗಮದೆಡೆ ತಾಂ ||೨೩೬|| 3
ಇರಲಾ ಪೊಸ್ತಿಲೊಳಂದು ನೃ |
ಹರಿ ರತ್ನಸ್ತಂಭಕುಡ್ಯಬಿಂಬಾವೃತನಾ ||

1 ಅರ್ಥಶ್ಲೇಷಮೂಲ. 2 ಕಾಕುಮೂಲ. 3 ಶ್ಲಾಘ್ಯಚಾರಿತಾಂಗ.

ಸುರರದಸಂಖ್ಯಾತದ ಪದಿ |
ಪರಿಜಂ ತನ್ಮೂರ್ತಿಯನರಿದಪರ್ ಕೃಷ್ಟ್ರದರ್ ||೧೩೭|| [1]

೯೬ ಅತ್ಯುಕ್ತಿ.

ಸುರಭೂಜಕೋಟಿಗಕ್ಕುಂ |
ನರಹರಿಭಕ್ತಾಂಘ್ರಿಧೂಳಿಕಣಮೂರವೆ ತಾಂ ||
ಸುರಧೇನುಬೃಂದಕಂ ತೃಣ |
ಭರದಂ ಚಿಂತಾಮಣಿಪ್ರಕಪಾರ್ಂಕಿತಮುಂ ||೧೩೮||

೯೭ ನಿರುಕ್ತಿ.

ಜಗಕುದ್ಘೋಷಿಸಿ ನಾನಿಂ |
ತೊಗೆವೆಂ ನಿಜಭಕ್ತರಕ್ಷಣಕ್ಕೆನುತಿಮ್ಮಂ ||
ದುಗಡದೊಳ್ಳಿದ್ದಪ್ಪ ಕತದೆ |
ಬಗೆವೆಂ ಪಂಚಾನನಂ ದಿಟಂ ನೀನೆನುತುಂ||೧೩೯||

೯೮ ಪ್ರತಿಷೇಧ.

ಪೊಡೆ ಕರಿನಮಾಂಸಸುರೆಯಿಂ |
ದಿಡೆಯೆ. ಕದುಪ್ಲಾಣುಮಾನಮುನಿವಸೆಯಲ್ಲಂ |
ಕಡುಕೋಪದಿದಸುರನೆಜಗ |
ಮಡಬಡಿಪಾ ಪ್ರಳಯವಗ್ನಿ ನೃಹರಿಸಮಾಖ್ಯಂ ||೧೪೦||

೯೯ ವಿಧಿ

..ಲೆ ಉದರ ಪರಾನ್ನಮಿದಂ |
ಸಲಪಲ್ಕೀಮೆಯ್ಯನುಣ್ಬುದಾನೃಹರಿ ಕಟಾ ||
ಕ್ಷಲವಕಮದೆಡೆಯೆನಿಸದನೊ |
ಡಲಪ್ಪುಖದಘಾನ್ನಮುಂಡ ನಿನಗೆತ್ತಣ ನಾಣ್ ||೧೪೧|

೧೦೦ ಹೇತು.

ಸುರರಾಜ್ಯಶ್ರೀವಿಭವಕೆ |
ನರಲೋಕವಿಭೂತಿಶಾಂತಿಧರ್ಮೋನ್ನತಿಗಾ ||

1 ಬುದ್ಧಿಮೂಲ.

ಉರಗಭಯಹೇತುಕಮನಕೆ |
ನರಹರಿಯವತರಿಸಿ ಬದ್ಧಪರಿಕರನೆನಿಕುಂ ||೨೪೨|| 1
ನತಭಕ್ತಾಯುದರ್ಶನ |
ಪ್ರಥಿತೋತ್ಸವಮೂರ್ತಿಮಂತನಸುರಜಯಾಹ್ಲಾ ||
ದದ ಜೀವಿತನುದ್ಯನ್ಮಧನ |
ನಿಧಿ ಜಯಿಪಂ ನೃಹರಿ ಯಮಿಹೃದಾನಂದಭರಂ ||೨೪೩|| 2

———○———

ಉಪಮಾದಿಪತ್ರಯುಕ್ತಶ |
ತಪತ್ರಬದ್ಧವಿದು ಮಾಲೆ ನಿನ್ನಕೊರಲ್ಗಿಂ ||
ತುಪಪನ್ನನೆನಗೆ ನೃಹರಿ ನು |
ತಿಪೊಡಕ್ಕೆ ರಸಾದ್ಯಲಂಕೃತಿಯಿಸುಂ ಮತಿ ತಾಂ||೨೪೪||

ರಸಾಲಂಕಾರಗಳು.

(೧) ರಸವತ್

ಮುನಿಯುವನೆ ಮಹಾತ್ಮಂ ಯೋ |
ಗಸಿಧಿ ತಪೋರಾಶಿಯೊಂದೆ ಜುಳಕದೊಳಾವಂ ||
ಗೆ ನೃಹರಿಯ ಮೀನಕಚ್ಛಪ |
ತನವೆರಡುಂ ದೃಷ್ಟಪಾಯ್ತುಗಸ್ತ್ಯಂ ಪ್ರಥಿತಂ ||೨೪೫||
ನರಹರಿ ಮಿಡಿಪಲ್ಪತಿಯನ |
ಸುರಿಯಿದು ಕಯ್ಯೆನುತೆ ನೀವಿಬಿಟ್ಟರ್ಗುಮುಡೆನೊಳ್ ||
ತೆರೆಗುಮುರೋಜಂ ಮದ್ದೀಕು |
ಮುರೆಯುಳ್ಳಳ್ಸ್ಪರ್ಶ ಜಘನ ನಾಭ್ಯೂರುಗಳಂ ||೨೪೬||

(೨) ಪ್ರೇಯಸ್.

ನರಹರಿ ಕಾಶಿಯೊಳೆಂದಾ |
ಸುರತಟಿನೀತೀರದೊಳ್ ಮನಸ್ಸಂಬದ್ಧತೆಯಿಂ ||
ನೆರೆದ ಬ್ರಹ್ಮ ನಂದದೆ |
ತೊರೆವೇನವಧೂತನಾಂ ಕಳೇಬರಮನಿದಂ ||೨೪೭||

1 ಪ್ರಥಮಭೇದ. 2 ದ್ವಿತೀಯಭೇದ.

ಗ್ರಹನಕ್ಷತ್ರಸಮಾಕುಲ |
ಮಹಿತಮಜಾಂಡಮೆನಲೆನಗಿ ದಾಶ್ಚರ್ಯಕರಂ ||
ನೃಹರಿಯೆ ವಾಗ್ಬೋಧಿಸುಗುಂ |
ಕುಹರಂ ತ್ವದುದರದ ಪಲವಿನಂ ಧರಿಸಿರೆತಾಂ ||೨೪೮||

(೩) ಊರ್ಜಸ್ವಿ.

ನರಹರಿ ನೀನವತರಿಸಲ್ |
ಪರಿದನಿಜಾವಸ್ಥೆಯರಿಯದಾ ಅಸುರಿಯರಂ ||
ನಿರುಕಿಸಿಕಾಡೊಳ್ ಪುಳಕಂ |
ಬಗೆಕೊಟ್ಟಂಬನಿಡೆ ಮರೆದರಂದು ಕಿರಾತರ್ ||೨೪೯||
ನಿನತು ಜನಿದೈತ್ಯಹತಿಗೆಂ |
ದೆನುತರಿದುಂ ಸಫಲಮೆಮ್ಮ ಕಣ್ಗಳನುತ್ತುಂ ||
ದನುಜರ್ ಬಲಿಮುಖ್ಯರ್ ನಿ |
ನ್ನ ನೃಹರಿ ನುತಿಗಲೆ ಸಾದರರ್ ತೊಡಗಿದಪರ್ ||೨೫೦||

(೪) ಸಮಾಹಿತ.

ಸ್ಥಿರನಾಗೆ ನೃಹರಿ ಬಂದಳ್ |
ಸಿರಿಯೇವಳ್‌ನೋಳ್ಪ ಮೆನುತವಳ್ ಮುಳಿಸಾಂತಳ್ ||
ಬರೆಯ ನೆನುತಿಂತಿರೆನಗಲ್ |
ನರಹರಿ ಸವ್ಯಾಜಮುಬಲೆ ಕಣ್ಬನಿಗರೆದಳ್ ||೨೫೧||

(೫) ಭಾವೋದಯ.

ರಿಪುಗಪಚೆಕೀರ್ಪಮನದಿಂ |
ದುಪಶಮಿತಂ ರಾಗಮುಳಿದುದಾ ವಿಷಯಸುಖಂ ||
ಅಪನೀತಮಿಂದು ನಿನತಾ |
ವಪ್ರವೊಂದೇ ನೃಹರಿ ನಿಲ್ಲದೋವುದು ಕೃಗೆಯಿಂ ||೨೫೨||

(೬) ಭಾವಸಂಧಿ.

ನೆಯನಯುಗಾಸೇ ಜನಕಂ |
ವಿನೆಯಜ್ಞರಜ್ಯೇಷ್ಠ ಚಿತ್ತಕಂದುಪ್ಪಾಸಂ ||

ಕ್ಷಯರಹಿತಾನಂದಜಮಂ ।
ತೆ ಯಥಾರ್ಥತ್ಸಸ್ಕೃಜಂ ನೃಹರಿಯಾ ರೂಪಂ ||೨೫೩||

(೭) ಭಾವಶಬಲ.

ತ್ವರೆಯೇಕೆ ಹೃದಯ ದಿನವೊಂ ।
ದರೊಳೇಂ ಧ್ರುವನರಿದನೀಕ್ಷಿಪಯ್ ನರಹರಿಯಂ ‖
ಅರಿದರ ನುಡಿಗೇಳುರಿ ಬಳ ।
ಸಿರಿಯು ಸೌಮ್ಯಂ ಮೊಗಮುದಲಭ್ಯವು ಮರಗಳ್ಗಂ ||೨೫೪||

ಪ್ರಮಾಣಾಲಂಕಾರಗಳು.

(೮) ಪ್ರತ್ಯಕ್ಷ.

ಧೃತಗಂಧಮೂಲ್ಯನಿಹೃತಿ ।
ನತತಪ್ತಸ್ವಾಂತಶೀತಲಂ ಜಿತವಿದ್ಯು ||
ದ್ದ್ಯುತಿ ಪುಷ್ಪರಸಂ ನೃಹರಿಯ ।
ನುತಿ ಘುಷ್ಟಂ ತನುವೊಳಾಳ್ದ ದಿಂದ್ರಿಯವರ್ಗಂ ||೨೫೫||
ಇದು ದೈತ್ಯಕುಲಾನಲತೇ ।
ಜದ ರಾಶಿಯೊ ನತತಮೋಘ್ನನೃಹರಿಯೊ ಎನುತುಂ ||೨೫೬||
ಒದವಿರೆ ಸಂದೆಗವೊಂದೆಯಿ ।
ರದ ಕತದಿಂದೂರ್ಧ್ವಗತಿ ನೃಹರಿ ಯೆಂದೇ ತಿಳಿಗುಂ ‖

(೯) ಅನುಮಾನ.

ಪಸರಿಸೆ ಕಳ್ತಲೆವ್ರೊಗೆ ದಶ ।
ದಿಶೆಗಳೊಳಂ ಮೆರೆಯೆ ತಾರಕಾಗ್ನಿಕಣಂಗಳ್ ||
ಎಸೆಯೆ ನೃಹರಿಶಿಖೆ ದಿವಿಜ ।
ದ್ವಿಷರೊಡ್ಡಿಗೆ ಬಿಳ್ದುದರಿವೆನಗ್ನಿಯೆನುತ್ತುಂ ||೨೫೭||
ಪರಿಪೂರ್ಣಲಕ್ಷ್ಮಿಯಿಂ ಧೃಢ ।
ಶರೀರದಿಂದಧಿಕಬಲದೆ ಪೆಚ್ಚಿದ ಗೆಲವಿಂ ‖
ಪರಿವಾರಮಿತ್ರಬಂಧುಸು ।
ಖರಿನರಿವೆನಿವಂಗೆ ನೃಹರಿ ಕರುಣಿಪನೆನುತುಂ ||೨೫೮||

## (೧೦) ಉಪಮಾನ.

ನರಹರಿಯು ವಾಮಪಾರ್ಶ್ವದ |
ತರಳತ್ವಂ ಸ್ತ್ರೀಮನೋಜ್ಞರೂಪೋತ್ಕರ್ಷಂ ||
ದೊರೆಕೊಂಡಿರ್ಪುದು ಮಾಯೆ |
ಪರನಾಮಂ ಲೋಕಮೋಕೆಯೆಂದರಿವುದು(ದು)ಂ ||೨೫೯||
ಶರದಿಂದುವೊಲತಿಧವಳಂ |
ತರಣಿಸಹಸ್ರಂಬೊಲಧಿಕತೇಜಂ ಮನದಂ |
ತಿರೆ ಯಮಿಗಳ ಉರುಸೌಮ್ಯಂ |
ನರಹರಿಯೆಂದರಿವೆನಾ ಜಗತ್ಪತಿಯುವನಂ ||೨೬೦||

## (೧೧) ಶಬ್ದಪ್ರಮಾಣ.

ಸರಹಸ್ಯಮಲ್ಲದೊಡಮುವ |
ನೊರೆದುದುರಿತ ಮುಕ್ತಿ ನೃಹರಿವಿಷಯಕಮೊಗೆದಂ ||
ಒರೆಗುಂ ಶ್ರುತಿಯಾವನಿನಾ |
ವಿರಾಜನುಂ ಪ್ರಮಿತಿಸಾಧ್ಯಮೆನಿಸಿದಪನವಂ ||೨೬೧||
ನರಹರಿ ರಕ್ಷಿಪನೀಷ |
ದ್ದುರಿತದಿನೆನೆ ಪೊರೆವ ಧರ್ಮಕಾಶಿಶು ಸುತನಂ ||
ಪೊರೆ ನಂಬಿದ ಸತಿಯುಂ ವೃ|
ದ್ಧರನೆನ್ನುಗಂ ಮನುವಕಾಶ್ಯದಾನುಂ ಪಿತರಂ ||೨೬೨||
ಸರಣಿಯಿದನಾದಿ ಶಿಷ್ಟಾ |
ಚರಿತಂ ಜ್ಞಾಪಕದಹೇತು ಬಿಂಬಮೆನುತ್ತಂ ||
ತಿರೆಪರಮೊಂದೆನುತರದಂ |
ವರಪಂಚಾಯತನಪೂಜೆಗೆಯ್ದಪೆನೆನುತುಂ ||೨೬೩||
ನರಹರಿಯೆ ಪರಾತ್ಪರನೆಂ|
ದೊರೆದೊಡೆ ಹಿತಮಪ್ಪೊಡಂವ ನೆನಲ್ಕಲ್ಪಂ ||
ಇರೆದಕ್ಕಂ ವ್ಯಥೆ ಮನಕಾ |
ದರಣೀಯಮಭೇದದುಕ್ತಿಯೆಮಗದರಿಂದಂ ||೨೬೪||

ಅತಿದುಃಖಮೆನಿಪ್ಪೀಸಂ |
ಸ್ಮೃತಿರೋಗಕೆ ಪೇಳ್ವುದೇಂ ಪ್ರಮಾಣಾಂತರಮುಂ ||
ಪ್ರತಿಕರ್ತೃ ನೃಹರಿ ಯೆನಲಾ |
ಶ್ರುತಿಯುವನಂ ಭಿಷಜರೊಳ್ ಭಿಷಕ್ತಮನೆನ್ಗುಂ ||೨೬೫||
ಕರಣಾತೀತನೆನಲ್ಕಂ |
ಪರಮಾತ್ಮಂ ಶ್ರುತಿ ಯುಪಾಸಕಗ್ಗೋರ್ಂಡೆಡೆಯೊಳ್ ||
ಅರಿವುಗುಮಿತ್ಥಂಭೂತಂ |
ನರಹರಿ ವರ್ಣನದೆ ಲಿಂಗದಿಂದವನೆನುತುಂ ||೨೬೬||
ಜ್ವಲನ ನಿನತಾಪೆ ವಿಫಲಂ |
ನಿಲೀನಮೆಂತಕ್ಕುಮೆನ್ನ ವಾಕ್ಕದು ನಿನ್ನೊಳ್ ||
ಸಲಿದಪುದೆಂದುಂ ನೃಹರಿಯ |
ಸಲೆ ನುತಿಯಿಂದವನ ಭಾವಮುದರ್ಕಂತ್ಯದೊಳಂ ||೨೬೭||

(೧೨) ಅರ್ಥಾಪತ್ತಿ

ಪಿರಿದೆನೆ ಶಾಸ್ತ್ರಂ ಕಥೆಯಿಂ |
ನರಹರಿ ಕೊಲ್ವುದು ಹಿರಣ್ಯಕಶಿಪುವನಸ್ಮೃತಂ ||
ಪೊರೆದುದುಮಾಪ್ರಹ್ಲಾದನ |
ನರಿಮಿತ್ರರವಂಗ ಮಿಪ್ಪರಲ್ಲದೊಡಲ್ತೇ ||೨೬೮||

(೧೩) ಅನುಪಲಬ್ಧಿ.

ಉಪಲಭ್ಯಮಾಗದುದರಿಂ |
ವಪುವಿಲ್ಲಂ ನಿನಗೆ ನಿಶ್ಚಿತಂ ನೃಹರಿಯುದೇ ||
ನುಪಕರಣಮುಸುರನನೆನೆ ಮ |
ಡಿಪಲದು ಮಾಯೇಂದ್ರಜಾಲನಿರ್ಮಿತಮಾಗಂ ||೨೬೯||

(೧೪) ಸಂಭವ.

ಎನಗಿದ್ದರ್ದುಮುಂದುಃಖಂ |
ಜನಿಪ್ಪನ್ನೆವರಮಿನ್ನುಮಿಪ್ಪುದದಲ್ತೇ ||
ಅನುಭವಿಪೆ ನಾದೊಡಂ ಸ್ವೈ |

ತನುರೂಪವೆ ನಿನಗೆ ನೃಹರಿ ಸರಣೆನಲದು ಪೇಳ್ ‖ ೨೦‖
ಪರದೋಷಾವಿಷ್ಕರಣೈ ।
ಕರತಗ್ಗೀದು ಯತ್ನಮಲ್ಲವೆನ್ನಸಧರ್ಮರ್ ‖
ಇಗರೇ ನೊಗೆಯುರೆ ನೃಹರಿಯೆ ।
ನಿರವಧಿ ಕಾಲಂ ಧರಿತ್ರಿ ವಿಪ್ಲವಮುದರೆಬರ್ ‖೨೨೧‖
ಪರಹಿತಕೆಳಸಿದೊಡಂ ನಿ ।
ನ್ನೇರಮೀರ್ಷ್ಯಾಲಕ್ಷ್ಯನೊಳನೆ ದುರ್ದೈವಹತಂ ‖
ನರಹರಿ ಸೃಷ್ಟಿಯಿದವಿತಂ ।
ಪರಿಪರಿಯಾಶ್ಚರ್ಯಮೆತ್ಮಲಾನುಮದಿಕ್ಕುಂ ‖೨೨೨‖

(೧೫) ಐತಿಹ್ಯ.

ಜನಸಿದ್ಧಗಾಥೆ ಸೂಕ್ತವಿ ।
ದೆನುತಿರ್ಕುಂ ನೃಹರಿಯೆನಗೆ ನಂಬುಗೆ ಪೂರ್ಣಂ
ಮನುಜಂ ಜೀವದಿಸಿದ್ಧಪ ।
ನೆನಲಾನಂದಂ ಶತಾಬ್ದದಾನುಂ ಬರ್ಕುಂ ‖೨೨೩‖

## ಸಂಸೃಷ್ಟಿ ಸಂಕರ ಗಳು

(೧೬) ಸಂಸೃಷ್ಟಿ.

ಸುಮಸೌರಭಲೋಭಪರಿ ।
ಭ್ರಮದ್ಭ್ರಮರ ಶೋಭಿಶೋಭಿತೋದ್ಯಾನಪಥಂ‖
ಸುಮನಸ್ಸುಮನೋರಂಜಕ ।
ಸುಮಸಮಯ ಸಮೀರಣಂ ನೃಹರಿಯಂ ಹರಿಕುಂ ‖೨೨೪‖
ಪಸರಿಪನೊ ನೃಹರಿ ಚಂದನ ।
ದೆಸೆವಣ್ಣನೆನಲ್ ವಿಲೇಪಿಕುಂ ತತ್ಕಳೆ ವಲ್ ‖
ಅಸದೃಶಫಲವಾದುದು ಕ ।
ಣ್ಗೆ ಸಾಧುಸಜ್ಜನರ ಸೇವೆಯಿಂದಂತಿರೆನ್ನೊಲ್ ‖೨೨೫‖
ಸುಮನಸ್ತೋಮಂ ಮುಂಸಿರಿ ।
ಯ ಮಂಜು ಮಂಜೀರಶಿಂಜಿತಂ ಸಾಂತ್ವಿಸಲು ‖

ದ್ಧಮಯಮುದಭ್ಯಸ್ತರುವಾ |
ಶಮನೋಪಾಯದವೊಲಂದು ನೃಹರಿಗೆ ನಮಿಕುಂ ||೨೭೬||

(೧೭) ಅಂಗಾಂಗಿಭಾವಸಂಕರ.

ನೆರವಾನಂದದ ರಭಸದೆ |
ಪರಿಕಂಪಿತಮಲೆಗುಮಂದು ನೃತ್ಸ್ವಜ್ಞಾನಂ ||
ನರಹರಿಯಿಂದೆ ತನೋ ||
ದ್ವಿರದಂಗಳಲೂನಗಾತ್ರಖಂಡಗಳವೊಲ್ ||೨೭೭||

(೧೮) ಸಮಪ್ರಾಧಾನ್ಯಸಂಕರ.

ತರಜಯದೆ ದಳಮನಂತಿರೆ |
ನಿರಸ್ತಭಂಗಿಯ್ಯು ತುಡುಗಳಂ ಜ್ವಾಲೆಯಿನಾ ||
ಪರಿಪ ತಮೋದರ್ಪದ ಭೀ|
ಕರದ ಮಹಾಮೋಹಮಂ ನೃಹರಿಗೆಲ್ದಪನೋ ||೨೭೮||

(೧೯) ಸಂದೇಹಸಂಕರ.

ದೊರೆಯಲ್ಕಮೃತ ತಟಾಕಂ |
ವಿರಚಿತ ಹೃದ್ರೋಗ ಹರಶಿಲಾತತಿಬಂಧಂ ||
ನೆರೆ ಮಜ್ಜಿಸಿ ಭವದುಃಖವಿ |
ಪರಿಭೂತಂ ನೃಹರಿ ಶಾಂತನೊಮ್ಮೆಯದಪ್ಪೋ ||೨೭೯||

(೨೦) ಏಕವಾಚಕಾನು ಪ್ರವೇಶಸಂಕರ

ಅಮಿತಜ್ವಾಲಾಮಾಲಾ |
ಸಮಲಂಕೃತನಾತ್ತ ಚಕ್ರವಿಕ್ರಮನೆಮಗಾ ||
ಸುಮನಸ್ಸುಮನೋರಂಜಕ |
ನಪವರ್ಗಸುಮಾರ್ಗನೀಗೆ ನೃಹರಿಯದೊಳ್ಪಂ ||೨೮೦||

ಉಪಸಂಹಾರ.

ಹರಿಯೊಸೆಗುಮಲಂಕಾರದಿ |
ನೊರೆಗುಮೆನುತ್ತೆನ್ನೊಳೆಂತು ಭೂಪಾದಿಗಳೀ ||
ಪರಿಯಿಂ ಮತ್ಸಾಧ್ಯಮಲಂ |

ಕರಣಚಯಂ ನೃಹರಿ ನಿನಗಿದರ್ಪಿತಮೊಸೆ ನೀಂ ||೨೮೧||
ಕುಡಿದಂ ಕುಡದಂ ಕುಡುದಂ |
ಕುಡುಕುಡುಕುಡೆನುತ್ತೆ ನುತಿಪುದೆಲ್ಲರ್ ಸಾಜಂ ||
ಒಡೆಯ ತೃಪ್ತಿಪ್ರೀತಿಯದಿ |
ಪ್ಪೊರ್ಡದಿನ್ನೇಂ ಬೇಳ್ಪುದೆಮಗಮದೊಂದೆ ಸಮಸಂ ||೨೮೨||
ಅನುದಿನಮಿಷ್ಟವಿಯೋಗದಿ |
ನನಿಷ್ಟಸಾಚಸ್ರಲಬ್ಧಿಯಿಂದಮುದೆಂನುಂ |
ಮನಕಂಟಿದ್ದರ್ ಪರುಜೆಯುಂ |
ತನುಗತಮಿದನುಂ ನೃಹರಿ ವಿನಾಶಿಸು ಕೃಪೆಯಿಂ ||೨೮೩||
ಕಳದತ್ತೆನ್ನೆಳವೆಯದೀ |
ಗಳೆ ತಾರುಣ್ಯಕ್ಕೆ ಮೊದಲಿದಂ ಬಿಜ್ಜೆಯನಾಂ ||
ಗಳಿಪೆಂ ಪ್ರತ್ಯಯದಿಂದಿ |
ನ್ನೊಳಿಯೆ ನತಾಭಾವಿದಶೆಗೆ ವಿಭುನೀನೆ ಪವಣ್ ||೨೮೪||
ಮತಿಲೇಶನಶಾಂತರಸಂ |
ಮಿತಲೋಕಜ್ಞಾನನಲ್ಪವಾಕ್ಕಪಟುವಲಂ ||
ಕೃತಿಯಿಂ ಯತ್ನಿಸಿದೆಂ ತ್ವ |
ತ್ಸ್ತುತಿಗಿಂ ನಿನಗಿಕ್ಕೆರ್ ನೃಹರಿ ತದ್ಭರಮೆಲ್ಲಂ ||೨೮೫||

|| ಭದ್ರಂ ಭೂಯಾತ್ ||

|| ಲಕ್ಷ್ಮೀನೃಸಿಂಹಾರ್ಪಿತೋವಿಜಯತೇಯಂಗ್ರಂಥಃ ||

ಶ್ರೀರಸ್ತು.

# ಅಲಂಕಾರಲಕ್ಷಣಂ.

---

"ಅಲಂಕ್ರಿಯತೇ ಅನೇನ"— ಎಂದು ಅಲಂಕಾರಶಬ್ದದ ವ್ಯುತ್ಪತ್ತಿ, ಇಲ್ಲಿ "ಅಲಂ" ಎಂದರೆ ಭೂಷಣಾರ್ಥವು:— ಎಂದರೆ ಯಾವುದರಿಂದ ವಾಕ್ಯು ಭೂಷಿಸಲ್ಪಡುವುದೋ ಅದಕ್ಕೆ ಅಲಂಕಾರವೆಂದು ಹೆಸರು. ಅಲಂಕಾರವೆಂದರೆ ಕೇವಲ ಚಮತ್ಕಾರದ ಮಾತುಗಳಾಡುವುದೇ ಅಲ್ಲ ; ವಾಕ್ಯು ಸಹೃದಯ ಹೃದಯಾಹ್ಲಾದಕವಾಗುವುದಕ್ಕೆ ಎಷ್ಟು ಭೂಷಣವುಳ್ಳದಾಗಿರಬೇಕೋ ಹಾಗೆ ಮಾಡುವುದು ಅಲಂಕಾರವೆನಿಸುವುದು. ಇದಕ್ಕೆ ಅನೇಕ ನಿಯಮಗಳುಂಟು; ಆ ನಿಯಮಗಳೆಲ್ಲವೂ ಸೇರಿ ಒಂದು ದೊಡ್ಡ ಶಾಸ್ತ್ರವೇ ಆಗಿರುವುದು ; ಅದಕ್ಕೆ "ಅಲಂಕಾರಶಾಸ್ತ್ರ" ವೆಂದು ಹೆಸರು. ಅಲಂಕಾರಶಾಸ್ತ್ರದಲ್ಲಿ ಹತ್ತು ಪ್ರಕರಣಗಳಿರುವುವು.

೧. ನಾಯಕಲಕ್ಷಣ—ಕಾವ್ಯದಲ್ಲಿಯ ಪಾತ್ರಗಳ ವಿಚಾರವಾದುದು. ನಾಯಕರೂ, ನಾಯಿಕೆಯರೂ ಅವರಿಗೆ ಸಹಾಯರಾಗುವರೂ. ಇವರ ಲಕ್ಷಣಗಳು ಯಾವ ಯಾವ ಕಾವ್ಯಗಳಲ್ಲಿ ಎಂತೆಂತಹ ನಾಯಿಕಾನಾಯಕರಿರಬೇಕು.—ಇತ್ಯಾದಿ ವಿಚಾರವಾದುದು.

೨. ಕಾವ್ಯಲಕ್ಷಣ:— ಕಾವ್ಯಗಳೆಷ್ಟು ವಿಧವಾಗುವುವು, ಯಾವ ಯಾವುದರಲ್ಲಿ ಯಾವ ಯಾವ ವಿಧದ ಶಯ್ಯಾದಿಗಳಿರಬೇಕು, ಇತ್ಯಾದಿ ವಿಚಾರವು.

೩. ನಾಟಕಪ್ರಕರಣ:— ನಾಟಕಗಳೆಷ್ಟು ವಿಧವಾಗುವುವು, ಅವುಗಳ ಲಕ್ಷಣಗಳೇನು, ಇತ್ಯಾದಿವಿಚಾರವು.

೪. ರಸಪ್ರಕರಣ:—ಇದು ಶೃಂಗಾರಾದಿ ನವರಸಗಳ ವಿಚಾರವಾದುದು.

೫ ದೋಷಪ್ರಕರಣ:— ಯಾವಯಾವುವು ಕಾವ್ಯದೋಷಗಳಾಗುವುವು, ಇತ್ಯಾದಿ ವಿಚಾರವು.

೬. ಗುಣಪ್ರಕರಣ:—ಯಾವಯಾವುವು ಕಾವ್ಯಗಳ ಗುಣವನ್ನು ಹೆಚ್ಚಿಸುವುವು? ಇತ್ಯಾದಿ ವಿಚಾರವು.

೭. ಕವಿಸಮಯ:— ಕವಿಗಳು ಸಂಕೇತವಾಗಿ ವರ್ಣಿಸುವ ವಿಷಯಗಳು.

೮. ಶಬ್ದಾಲಂಕಾರ:— ಶಬ್ದಗಳಿಂದಲೇ ಕಾವ್ಯಕ್ಕೆ ಶೋಭಾವಿಶೇಷವನ್ನುಂಟುಮಾಡುವುದು.

೯. ಮಿಶ್ರಾಲಂಕಾರ:—ಶಬ್ದಗಳಿಂದಲೂ ಅರ್ಥದಿಂದಲೂ ಕಾವ್ಯಕ್ಕೆ ಶೋಭಾವಿಶೇಷವನ್ನುಂಟುಮಾಡುವುದು.

೧೦. ಅರ್ಥಾಲಂಕಾರ:— ಅರ್ಥಮಾತ್ರದಿಂದಲೇ ಕಾವ್ಯಕ್ಕೆ ಶೋಭೆಯನ್ನುಂಟುಮಾಡುವುದು.

ಈ ಹತ್ತು ಪ್ರಕರಣಗಳಲ್ಲಿ ಕೊನೆಯದಾದ ಅರ್ಥಾಲಂಕಾರವನ್ನೇ ಅಲಂಕಾರವೆಂದು ಸಾಮಾನ್ಯವಾಗಿ ಹೇಳಿಕೊಳ್ಳುವುದುಂಟು ; ಅದನ್ನೇ ಜನರು ತಿಳಿಯ ಯತ್ನಿಸುವುದು ಹೆಚ್ಚು. ಇತರವಿಷಯಗಳು ಕೇವಲ ಗಹನವಾಗಿರುವುದರಿಂದ ಅವೆಲ್ಲ ಸಾಹಿತ್ಯಾಂತದಲ್ಲಿ ತಿಳಿಯತಕ್ಕುವಾಗಿರುವುವು. ಪ್ರಕೃತದಲ್ಲಿ ಈ ಅರ್ಥಾಲಂಕಾರ ಪ್ರಕರಣದ ಪಡಿಯೊಂದು ಅಲಂಕಾರಕ್ಕೂ ಉದಾಹರಣೆಯಾಗುವಂತೆ ಒಂದೊಂದು ಪದ್ಯವನ್ನು ಬರೆದಿರುವುದು. ಆ ಆ ಅಲಂಕಾರದ ಲಕ್ಷಣವನ್ನೂ ಅದರ ಅಂತರ್ಭೇದವನ್ನೂ ತಿಳಿದುಕೊಳ್ಳುವುದೂ ಪ್ರಯೋಜನಕಾರಿಯಾದುದರಿಂದ ಅದನ್ನು ತಿಳಿಯಲಪೇಕ್ಷಿಸುವರಿಗಾಗಿ ಈ ಶೇಷಸಂಗ್ರಹವು ಸಂಗ್ರಹಿಸಲ್ಪಟ್ಟು ಬರೆಯಲ್ಪಟ್ಟಿರುವುದು. ಇದರಲ್ಲಿ ಪ್ರಯೋಗಿಸಿರುವ ಅನೇಕ ಶಬ್ದಗಳು ಪಾರಿಭಾಷಿಕ ಶಬ್ದಗಳೆಂದು ತಿಳಿದು ಅವುಗಳಿಗೆ ಸರಿಯಾದ ಅರ್ಥವನ್ನು ಮಾಡಿಕೊಳ್ಳುವುದಕ್ಕೆ ಯತ್ನಿಸಬೇಕು. ಹೆಚ್ಚು ವಿಷಯಗಳನ್ನು ತಿಳಿಯಲಪೇಕ್ಷಿಸುವರು ಇತರ ಗ್ರಂಥಗಳನ್ನು ನೋಡಬಹುದು.

೧. ಉಪಮೆ— ಇದು ಅಲಂಕಾರಗಳಲ್ಲೆಲ್ಲಾ ಪ್ರಧಾನವಾದುದು. ಉಪಮೆಯೆಂದರೆ ಹೋಲಿಕೆ. ಇದರಲ್ಲಿ ಎರಡು ವಸ್ತುಗಳಿರುವುವು; ಒಂದು ಹೋಲಿಸಲ್ಪಡುವುದು; ಒಂದು ಹೋಲಿಸುವುದು; ಹೋಲಿಸಲ್ಪಡುವುದಕ್ಕೆ ಉಪಮೇಯವೆಂದು ಹೆಸರು; ಹೋಲಿಸುವದಕ್ಕೆ ಉಪಮಾನವೆಂದು ಹೆಸರು; ಈ ಎರಡು ವಸ್ತುಗಳೂ ಭಿನ್ನವಾಗಿರಬೇಕು.

ಅವಕ್ಕೆ ಯಾವವಿಧದಲ್ಲಿ ಹೋಲಿಕೆಯೋ ಅದಕ್ಕೆ ಧರ್ಮವೆಂದು ಹೆಸರು. ಹೋಲಿಸುವಾಗ 'ಇದರ ಹಾಗೆ,' 'ಅದರಹಾಗೆ' ಎಂದು ಹೇಳಬೇಕಾಗುವುದರಿಂದ 'ಹಾಗೆ' ಎಂಬರ್ಥವುಳ್ಳ ಶಬ್ದವೊಂದು ಬೇಕಾಗುವುದು ; ಇಂತಹ ಶಬ್ದಕ್ಕೆ ವಾಚಕವೆಂದು ಹೆಸರು. ಎಲ್ಲಿ ಎರಡು ವಸ್ತುಗಳಿಗೆ ಸಾದೃಶ್ಯವು ಚೆನ್ನಾಗಿಕಾಣಬರುವುದೋ ಅವಕ್ಕೆ ಉಪಮಾಲಂಕಾರವೆಂದು ಹೆಸರು. ಉಪಮಾನ, ಉಪಮೇಯ, ಧರ್ಮ, ವಾಚಕ- ಈ ನಾಲ್ಕೂ ಸಮಗ್ರವಾಗಿದ್ದರೆ ಅಲಂಕಾರಕ್ಕೆ ಪೂರ್ಣೋಪಮೆಯೆಂದು ಹೆಸರು; ಇವುಗಳಲ್ಲಿ ಯಾವುವಾದರೂ ಉಕ್ತವಾಗಿರದೆ ಅರ್ಥದಿಂದ ನಿರ್ಧರಿಸಲ್ಪಡಬೇಕಾದರೆ ಅದಕ್ಕೆ ಲುಪ್ತೋಪಮೆಯೆಂದು ಹೆಸರು. ಪೂರ್ಣೋಪಮೆ ಒಂದೇ ವಿಧವಾಗಿರುವುದು. (ಉದಾಹರಣೆ—ಪದ್ಯ ೩) ಲುಪ್ತೋಪಮೆಯಾದರೆ ಎಂಟು ವಿಧವಾಗುವುದು. (೧) ವಾಚಕವಿಲ್ಲದಿದ್ದರೆ ವಾಚಕಲುಪ್ತೋಪಮೆಯೆಂದು ಹೆಸರು. (ಉದಾ. ಪದ್ಯ ೪); (೨) ಧರ್ಮವಿಲ್ಲದಿದ್ದರೆ ಧರ್ಮಲುಪ್ತೋಪಮೆಯೆನಿಸುವುದು (ಉದಾ.-ಪದ್ಯ ೫) ; (೩) ಧರ್ಮವೂ ವಾಚಕವೂ ಇಲ್ಲದಿದ್ದರೆ ಧರ್ಮವಾಚಕಲುಪ್ತೋಪಮೆಯೆಂದು ಹೆಸರು. ಉದಾ. ಪದ್ಯ ೬) ;(೪) ವಾಚಕವೂ ಉಪಮೇಯವೂ ಇಲ್ಲದಿದ್ದರೆ ವಾಚಕೋಪಮೇಯ ಲುಪ್ತೋಪಮೆ ಯೆಂದು ಹೆಸರು (ಉದಾ.- ಪದ್ಯ ೭); (೫) ಉಪಮಾನವೇ ಇಲ್ಲದಿದ್ದರೆ ಉಪಮಾನಲುಪ್ತೋಪಮೆಯೆಂದು ಹೆಸರು (ಉದಾ. ಪದ್ಯ ೮); (೬) ವಾಚಕವೂ ಉಪಮಾನವೂ ಇಲ್ಲದಿದ್ದರೆ ವಾಚಕೋಪಮಾನಲುಪ್ತೋಪಮೆಯೆಂದು ಹೆಸರು (ಉದಾ-ಪದ್ಯ ೯) ; (೭) ಧರ್ಮವೂ ಉಪಮಾನವೂ ಇಲ್ಲದಿದ್ದರೆ ಧರ್ಮೋಪಮಾನ ಲುಪ್ತೋಪಮೆಯೆಂದು ಹೆಸರು (ಉದಾ.-ಪದ್ಯ ೧೦) ;(೮) ಧರ್ಮವೂ ಉಪಮಾನವೂ ವಾಚಕವೂ ಇಲ್ಲದಿದ್ದರೆ ಧರ್ಮೋಪಮಾನ ವಾಚಕಲುಪ್ತೋಪಮೆಯೆಂದು ಹೆಸರು. (ಉದಾ.-ಪದ್ಯ ೧೧) ಇತರ ಗ್ರಂಥಗಳಲ್ಲಿ ಉಪಮೆಯ ಇತರ ಭೇದಗಳು ಉಕ್ತವಾಗಿರುವುವು ; ನಾವು ಕುವಲಯಾನಂದ ಮಾರ್ಗವನ್ನು ಅನುಸರಿಸುವುದರಿಂದ ಅಲ್ಲಿ ಎಷ್ಟು ಉಕ್ತವಾಗಿರುವುದೋ ಅಷ್ಟಕ್ಕೇ ಲಕ್ಷ್ಯಗಳನ್ನು ಕಲ್ಪಿಸಿರುವೆವು.

೨. ಅನನ್ವಯ:—ಎಲ್ಲಿ ಉಪಮಾನವೂ ಉಪಮೇಯವೂ ಒಂದೇ ವಸ್ತುವಾಗಿರುವಂತೆ ವರ್ಣಿಸಲ್ಪಟ್ಟಿರುವುದೋ ಅದಕ್ಕೆ ಅನನ್ವಯಾಲಂಕಾರ

ವೆಂದು ಹೆಸರು (ಉದಾ.-ಪದ್ಯ ೧೨) (ವರ್ಣಿಸಲ್ಪಡುವ ವಸ್ತುವಿಗೆ ಸಮಾನವಾದುದು ಬೇರೊಂದಿಲ್ಲವೆಂದು ಇದರಿಂದ ಧ್ವನಿತವಾಗುವುದು.)

೩. ಉಪಮೇಯೋಪಮೆ.—ಎರಡು ಭಿನ್ನವಸ್ತುಗಳಿದ್ದು ಒಂದಕ್ಕೊಂದನ್ನು ಪರ್ಯಾಯವಾಗಿ ಹೋಲಿಸಿದ್ದರೆ ಉಪಮೇಯೋಪಮಾಲಂಕಾರವೆನಿಸುವುದು. (ಉದಾ—ಪದ್ಯ.೧೩) (ಇದರಿಂದ ಆ ಎರಡು ವಸ್ತುಗಳಿಗೆ ಸದೃಶವಾದ ತೃತೀಯವಸ್ತು ಲಭಿಸಲಾರದೆಂದು ಧ್ವನಿತವಾಗುವದು.

೪. ಪ್ರತೀಪ— ಉಪಮಾನವನ್ನೇ ಉಪಮೇಯವಾಗಿ ಮಾಡಿ ವರ್ಣಿಸಿದ್ದರೆ ಪ್ರತೀಪಾಲಂಕಾರವೆನಿಸುವುದು. (ಯಾವುದು ಉಪಮಾನವಾಗಿಯೂ ಯಾವುದು ಉಪಮೇಯವಾಗಿಯೂ ಪ್ರಸಿದ್ಧವಾಗಿರುವುವೋ ಅವುಗಳನ್ನು ಹೆಚ್ಚು ಕಡಿಮೆ ಮಾಡುವುದರಿಂದ ಪ್ರತೀಪವೆಂಬ ಹೆಸರು ಬರುವುದು. (ಉದಾ.-ಪದ್ಯ ೧೪). ಇದರಲ್ಲಿ ಇನ್ನೂ ಎರಡು ಭೇದಗಳಿರುವುವು. (೧) ಮತ್ತೊಂದು ಉಪಮೇಯವನ್ನು ತೋರಿ ಪ್ರಕೃತವಾದ ಉಪಮೇಯವನ್ನು ನಿರಾಕರಿಸುವುದು (ಉದಾ. ಪ– ೧೫) (೨) ವರ್ಣ್ಯವಾದ ಉಪಮೇಯವನ್ನು ತೋರಿ ಮತ್ತೊಂದು ಉಪಮೇಯವನ್ನು ನಿರಾಕರಿಸುವುದು. (ಉದಾ-ಪದ್ಯ ೧೬)

೫. ರೂಪಕ.-ಉಪಮಾನೋಪಮೇಯುಗಳಿಗೆ ಎಲ್ಲಿ ಅಭೇದವಾಗಲಿ ತಾದ್ರೂಪ್ಯವಾಗಲೀ ವರ್ಣಿತವಾಗಿರುವುದೋ ಅದು ರೂಪಕಾಲಂಕಾರವೆನಿಸುವುದು. ಅಭೇದದಲ್ಲಿಯೂ ತಾದ್ರೂಪ್ಯದಲ್ಲಿಯೂ ಆಧಿಕ್ಯ, ನ್ಯೂನತ್ವ ಅನುಭಯೋಕ್ತಿ ಎಂದು ಮೂರು ಮೂರು ಭೇದಗಳಾಗುವುವು. ಆದುದರಿಂದ ರೂಪಕದಲ್ಲಿ ಒಟ್ಟು ಆರು ಭೇದಗಳಾಗುವುವು.

(೧) ಅನುಭಯಾಭೇದರೂಪಕ (ಉದಾ.-ಪದ್ಯ ೧೭) ;
(೨) ನ್ಯೂನಾಭೇದರೂಪಕ (ಉದಾ-ಪದ್ಯ ೧೮) ;
(೩) ಅಧಿಕಾಭೇದರೂಪಕ (ಉದಾ.-ಪದ್ಯ ೧೯) ;
(೪) ಅನುಭಯತಾದ್ರೂಪ್ಯರೂಪಕ (ಉದಾ.-ಪದ್ಯ ೨೦) ;
(೫) ನ್ಯೂನತಾದ್ರೂಪ್ಯರೂಪಕ (ಉದಾ-ಪದ್ಯ ೨೧) ;
(೬) ಅಧಿಕತಾದ್ರೂಪ್ಯರೂಪಕ (ಉದಾ.-ಪದ್ಯ ೨೨) ;

೬. ಪರಿಣಾಮ.— ಎಲ್ಲಿ ಆರೋಪ್ಯಮಾಣವಾದ ವಿಷಯಿಯೇ ವಿಷ

ಯಾತ್ಮಕವಾಗಿದ್ದು ನಿಬಧ್ಯಮಾನಕಾರ್ಯಕ್ಕೆ ಉಪಯೋಗಿಯಾಗಿರುವುದೋ ಅಲ್ಲಿ ಪರಿಣಾಮಾಲಂಕಾರವೆನಿಸುವುದು. (ಉದಾ.-ಪದ್ಯ ೨೩)

೭. ಉಲ್ಲೇಖ. (೧) ಎಲ್ಲಿ ನಾನಾವಿಧ ಧರ್ಮಗಳನ್ನು ಒಳಕೊಂಡ ಒಂದೇ ವಸ್ತು ಆ ಆ ಧರ್ಮಗಳ ಅಂಗೀಕಾರದಿಂದ ಅನೇಕ ಗ್ರಹೀತೃಗಳಿಂದ ಅನೇಕವಿಧವಾಗಿ ಉಲ್ಲೇಖಿಸಲ್ಪಡುವುದೋ ಅಲ್ಲಿ ಉಲ್ಲೇಖಾಲಂಕಾರವಾಗುವುದು (ಉದಾ.-ಪದ್ಯ ೨೪.) (೨) ಗ್ರಹೀತೃಭೇದವಿಲ್ಲದಿದ್ದರೂ ಒಂದೇ ವಸ್ತುವೇ ವಿಷಯಭೇದದಿಂದ ಬಹುಪ್ರಕಾರವಾಗಿ ಉಲ್ಲೇಖಿಸಲ್ಪಡುವುದೋ ಅದೂ ಉಲ್ಲೇಖಾಲಂಕಾರವೆನಿಸುವುದು. (ಉದಾ.ಪ.೨೫)

೮. ಸ್ಮೃತಿಮತ್:—ಒಂದು ವಸ್ತುವನ್ನು ನೋಡುವುದರಿಂದ ತತ್ಸದೃಶವಾದ ಮತ್ತೊಂದುವಸ್ತು ಸ್ಮರಣೆಗೆ ಬರುವಂತೆ ವರ್ಣಿತವಾಗಿದ್ದರೆ ಸ್ಮೃತಿಮದಲಂಕಾರವೆನಿಸುವುದು (ಉ.-ಪದ್ಯ ೨೬ )

೯. ಭ್ರಾಂತಿಮತ್:— ಮೇಲೆಹೇಳಿದ ಸ್ಮರಣೆಯಸ್ಥಳದಲ್ಲಿ ಭ್ರಾಂತಿಯುಂಟಾದಂತೆ ವರ್ಣಿಸಲ್ಪಟ್ಟದ್ದರೆ ಭ್ರಾಂತಿಮದಲಂಕಾರವೆನಿಸುವುದು (ಉದಾ.-ಪದ್ಯ ೨೭ )

೧೦. ಸಂದೇಹ:—ಹಾಗೆಯೇ ಸಂದೇಹವು ವರ್ಣಿತವಾಗಿದ್ದರೆ ಸಂದೇಹಾಲಂಕಾರವೆನಿಸುವುದು (ಉದಾ.-ಪದ್ಯ ೨೮ )

೧೧. ಅಪಹ್ನುತಿ:— ಅಪಹ್ನುತಿಯೆಂದರೆ ಮರೆಮಾಡುವುದೆಂದು ಸಾಮಾನ್ಯಾರ್ಥವು. ಈ ಅಲಂಕಾರವು ಒಂಭತ್ತು ವಿಧವಾಗುವುದು.

(೧) ಶುದ್ಧಾಪಹ್ನುತಿ— ಒಂದುವಸ್ತು ವರ್ಣನೀಯವಾಗಿರಲು ತತ್ಸದೃಶ ಧರ್ಮಾರೋಪ ಪ್ರಯೋಜನಕ್ಕಾಗಿ ಆ ವರ್ಣನೀಯ ವಸ್ತುವಿನ ಧರ್ಮವನ್ನು ಮರೆಮಾಡುವುದಾಗಲಿ; ಕವಿಬುದ್ಧಿವಿಕಾಸದಿಂದ ಉತ್ಪ್ರೇಕ್ಷಿತವಾದ ಧರ್ಮಾಂತರವನ್ನಾಗಲೀ ಮರೆಮಾಡುವುದು ಶುದ್ಧಾಪಹ್ನುತಿಯೆನಿಸುವುದು.(ಉದಾ.-ಪದ್ಯ ೨೯ )

(೨) ಹೇತ್ವಪಹ್ನುತಿ:— ಅದೇ ಯುಕ್ತಿಪೂರ್ವಕವಾದರೆ ಹೇತ್ವಪಹ್ನುತಿಯೆನಿಸುವುದು. (ಉದಾ.-ಪದ್ಯ ೩೦ )

(೩) ಪರ್ಯಸ್ತಾಪಹ್ನುತಿ:-- ಎಲ್ಲಿ ಒಂದುವಸ್ತುವಿನ ಧರ್ಮವನ್ನು ನಿಹ್ನವ (ಮರೆ) ಮಾಡಿ ಬೇರೊಂದು ವರ್ಣನೀಯವಾದ ವಸ್ತುವಿನಲ್ಲಿ

ಅದರ ಧರ್ಮವನ್ನು ಆರೋಪಿಸಿದ್ದರೆ ಪರ್ಯಸ್ತಾಪಹ್ನುತಿಯೆನಿಸುವುದು (ಉದಾ.-ಪದ್ಯ ೩೧)

(೪) + ೫.- ಭ್ರಾಂತಾಪಹ್ನುತಿ: — ಇನ್ನೊಂದು ವಸ್ತುವಿನ ಶಂಕೆಯಿಂದ ಭ್ರಾಂತಿಗೆ ಕಾರಣವಿರಲು ಅನ್ಯರ ಶಂಕೆಗೆ ಬಾಧಕವಾದ ವೈಧರ್ಮ್ಯವನ್ನು ಹೇಳಿ ಆ ಭ್ರಾಂತಿಯನ್ನು ನಿವಾರಣಮಾಡಿದರೆ ಭ್ರಾಂತಾಪಹ್ನುತಿಯೆನಿಸುವುದು.

(೪) ಭ್ರಾಂತಿ ಸ್ವಾಭಾವಿಕವಾದುದಾದನೆ ಸಂಭವದ್ಭ್ರಾಂತಾಪಹ್ನುತ್ಯಲಂಕಾರವೆನಿಸುವುದು (ಉದಾ -ಪದ್ಯ ೩೨)

(೫) ಭ್ರಾಂತಿ ಕಲ್ಪಿತವಾದುದಾಗಿ ತೋರಬಂದರೆ ಅದು ಕಲ್ಪಿತಭ್ರಾಂತಾಪಹ್ನುತ್ಯಲಂಕಾರವೆನಿಸುವುದು (ಉದಾ.-ಪದ್ಯ ೩೩ )

(೬ + ೭ + ೮) ಛೇಕಾಪಹ್ನುತಿ. ಒಬ್ಬನು ಮತ್ತೊಬ್ಬನಿಗೆ ತನ್ನ ರಹಸ್ಯಾದಿಗಳನ್ನು ಹೇಳುತ್ತಿರಲು ಅದನ್ನು ಇನ್ನು ಯಾರಾದರೂ ಕೇಳಿ, ತನ್ನಮಾತಿನ ಯಥಾರ್ಥಾಭಿಪ್ರಾಯವನ್ನು ತಿಳಿದುಕೊಂಡು ಪ್ರಶ್ನೆಮಾಡಿದರೆ ಲಜ್ಜಾಭಯಾದಿಗಳಿಂದ ತನ್ನಮಾತಿಗೆ ತಾತ್ಪರ್ಯಾಂತರವನ್ನು ಕಲ್ಪಿಸಿ ತಥ್ಯನಿಹ್ನವಮಾಡಿದಂತೆ ವರ್ಣಿತವಾಗಿದ್ದರೆ ಛೇಕಾಪಹ್ನುತಿಯೆಂದು ಹೆಸರು. ಛೇಕವೆಂದರೆ ವಿದಗ್ಧರೆಂದರ್ಥವು; ಹಾಗೆ ತಾತ್ಪರ್ಯಾಂತರಕಲ್ಪನೆಮಾಡಿ ಯಥಾರ್ಥನಿಹ್ನವಮಾಡುವುದು ಛೇಕ ( ವಿದಗ್ಧ )ರಿಗೆ ಸಾಧ್ಯವಾದುದರಿಂದ ಛೇಕಾಪಹ್ನುತಿಶಬ್ದವು ಅನ್ವರ್ಥವಾದುದು. ಇದರಲ್ಲಿ ಮೂರು ಭೇದಗಳಿರುವುವು:—

(೬) ಅರ್ಥಯೋಜನಾಛೇಕಾಪಹ್ನುತಿ (ಉದಾ.- ಪದ್ಯ ೩೪) ;

(೭) ಶಬ್ದಯೋಜನಾಛೇಕಾಪಹ್ನುತೀ (ಉದಾ.- ಪದ್ಯ ೩೫ ) ;

(೮) ಅವಸ್ಥಾ ಭೇದಯೋಜನಾಛೇಕಾಪಹ್ನುತಿ(ಉದಾ -ಪದ್ಯ ೩೬)

ಈ ಭೇದಗಳ ಅರ್ಥವು ಸ್ವತಸ್ಸಿದ್ಧವಾಗಿರುವುದು.

(೯) ಕೈತವಾಪಹ್ನುತಿ:-ವ್ಯಾಜಾದಿಪದಪ್ರಯೋಗಮಾಡಿ ಯಥಾರ್ಥವನ್ನು ನಿಹ್ನವಮಾಡಿದರೆ ಕೈತವಾಪಹ್ನುತಿಯೆನಿಸುವುದು(ಉದಾ.-ಪದ್ಯ೩೭)

೧೨. ಉತ್ಪ್ರೇಕ್ಷೆ— ಅಪ್ರಕೃತವಾದ ಧರ್ಮಸಂಬಂಧವನ್ನು ನಿಮಿತ್ತಮಾಡಿಕೊಂಡು ಪ್ರಕೃತವಸ್ತುವಿನಲ್ಲಿ ಆ ಧರ್ಮವನ್ನು ಸಂಭಾವಿಸುವುದು

ಉತ್ಪ್ರೇಕ್ಷಾಲಂಕಾರವೆನಿಸುವುದು. ಸಂಭಾವನೆಯೆಂದರೆ ಉತ್ಕಟಕೋಟಿಕವಾದ ಸಂಶಯುವು. (ಆದುದರಿಂದ "ಹೀಗಿರಬಹುದೋ" 'ನಾನು ಹೀಗೆ ತಿಳಿವೆನು' 'ನಿಶ್ಚಯುವು'ದಲ್, ಇತ್ಯಾದಿ'—ಇತ್ಯಾದಿಗಳಲ್ಲಿ ಯಾವುದಾದರೂ ಒಂದು ಉತ್ಪ್ರೇಕ್ಷೆಯಲ್ಲಿರಬೇಕು; ಇಲ್ಲದಿದ್ದರೆ ಗಮ್ಯೋತ್ಪ್ರೇಕ್ಷೆಯನಿಸುವುದು) ಆ ಸಂಭಾವನೆವಸ್ತು, ಹೇತು, ಫಲಾತ್ಮಕವಾಗಿ ಗೋಚರವಾಗುವುದು. ವಸ್ತೂತ್ಪ್ರೇಕ್ಷೆಯಲ್ಲಿ ಉಕ್ತವಿಷಯ, ಅನುಕ್ತ ವಿಷಯ, ಎಂಬ ಭೇದಗಳೂ ಹೇತೂತ್ಪ್ರೇಕ್ಷೆಯಲ್ಲಿಯೂ ಫಲೋತ್ಪ್ರೇಕ್ಷೆಯಲ್ಲಿಯೂ ಸಿದ್ಧ ವಿಷಯ-ಅಸಿದ್ಧವಿಷಯ, ಎಂಬ ಎರಡೆರಡು ಭೇದಗಳೂ ಇರುವುವು;

(೧) ಉಕ್ತವಿಷಯ ಸ್ವರೂಪೋತ್ಪ್ರೇಕ್ಷೆ (ಉದಾ.-ಪದ್ಯ ೩೮);
(೨) ಅನುಕ್ತವಿಷಯ ಸ್ವರೂಪೋತ್ಪ್ರೇಕ್ಷೆ (ಉದಾ.-ಪದ್ಯ೩೯) ;
(೩) ಸಿದ್ಧವಿಷಯ ಹೇತೂತ್ಪ್ರೇಕ್ಷೆ (ಉದಾ.-ಪದ್ಯ ೪೦);
(೪) ಅಸಿದ್ಧವಿಷಯ ಹೇತೂತ್ಪ್ರೇಕ್ಷೆ (ಉದಾ.-ಪದ್ಯ ೪೧)
(೫) ಸಿದ್ಧವಿಷಯಫಲೋತ್ಪ್ರೇಕ್ಷೆ (ಉದಾ.-ಪದ್ಯ ೪೨)
(೬) ಅಸಿದ್ಧವಿಷಯಫಲೋತ್ಪ್ರೇಕ್ಷೆ (ಉದಾ.-ಪದ್ಯ ೪೩)

(೭) ಗಮ್ಯೋತ್ಪ್ರೇಕ್ಷೆ:—ಉತ್ಪ್ರೇಕ್ಷಾವ್ಯಂಜಕಶಬ್ದಗಳಿಲ್ಲದಿರುವುದು (ಉದಾ.-ಪದ್ಯ ೪೪ )

(೧೩) ಅತಿಶಯೋಕ್ತಿ:— ವಿಷಯನಿಗರಣಪೂರ್ವಕವಾಗಿ ವಿಷಯುವನ್ನು ವಿಷಯಿರೂಪವುಳ್ಳದಾನಂತೆ ಅಧ್ಯವಸಾನಮಾಡಿದರೆ ರೂಪಕಾತಿಶಯೋಕ್ತಿಯೆನಿಸುವುದು. ವಿಷಯನಿಗರಣವೆಂದರೆ ವಿಷಯುವನ್ನು ಸ್ವಶಬ್ದದಿಂದ ಉಲ್ಲೇಖನಮಾಡದಿದ್ದರೂ ವಿಷಯಿವಾಚಕವಾದ ಶಬ್ದದಿಂದಲೇ ಗ್ರಹಣಮಾಡುವುದು. ಈ ರೂಪಕಾತಿಶಯೋಕ್ತಿಯಲ್ಲಿ ರೂಪಕದಲ್ಲಿರುವ ಆರು ಚಮತ್ಕಾರಗಳೂ ಬರಬಹುದು.

(೧) ಅನುಭಯಾಭೇದರೂಪಕಾತಿಶಯೋಕ್ತಿ (ಉದಾ.-ಪದ್ಯ ೪೫);
(೨) ನ್ಯೂನಾಭೇದರೂಪಕಾತಿಶಯೋಕ್ತಿ(ಉದಾ.-ಪದ್ಯ ೪೬)
(೩) ಅಧಿಕಾ ಭೇದ ರೂಪಕಾತಿಶಯೋಕ್ತಿ (ಉದಾ.-ಪದ್ಯ ೪೭)
(೪) ಅಧಿಕತಾದ್ರೂಪ್ಯಾತಿಶಯೋಕ್ತಿ (ಉದಾ.-ಪದ್ಯ ೪೮ )
(೫) ಅನುಭಯತಾದ್ರೂಪ್ಯಾತಿಶಯೋಕ್ತಿ (ಉದಾ.-ಪದ್ಯ ೪೯)

(೬) ನ್ಯೂನತಾದ್ರೂಪ್ಯಾತಿಶಯೋಕ್ತಿ (ಉದಾ.-ಪದ್ಯ ೫೦)

(೭) ಸಾಪಹ್ನವರೂಪಕಾತಿಶಯೋಕ್ತಿ,— ರೂಪಕಾತಿಶಯೋಕ್ತಿಯೇ ಅಪಹ್ನುತಿಗರ್ಭವಾಗಿದ್ದರೆ ಸಾಪಹ್ನವರೂಪಕಾತಿಶಯೋಕ್ತಿಯೆನಿಸುವುದು (ಉದಾ.-ಪದ್ಯ ೫೧)

ಇದರಲ್ಲಿ ಅಪಹ್ನುತಿಯಲ್ಲಿರುವ ಚಮತ್ಕಾರಗಳೆಲ್ಲವೂ ಬರಬಹುದು. ಅವು ಇಲ್ಲಲ್ಲಿ ಕಾಣಬರಬಹುದಾದುದರಿಂದ ಪ್ರತ್ಯೇಕವಾಗಿ ಲಕ್ಷ್ಯಗಳನ್ನು ಕಲ್ಪಿಸಿಲ್ಲ.

(೮) ಭೇದಕಾತಿಶಯೋಕ್ತಿ-ಭೇದವಿಲ್ಲದಿದ್ದರೂ ಭೇದತೋರುವಂತೆ ವರ್ಣನೆಮಾಡಿದ್ದರೆ ಭೇದಕಾತಿಶಯೋಕ್ತಿಯೆನಿಸುವುದು (ಉದಾ-ಪದ್ಯ.೫೨):

(೯) ಸಂಬಂಧಾತಿಶಯೋಕ್ತಿ- ಸಂಬಂಧವಿಲ್ಲದಿದ್ದರೂ ಸಂಬಂಧವಿರುವಂತೆ ವರ್ಣಿಸಿದ್ದರೆ ಸಂಬಂಧಾತಿಶಯೋಕ್ತಿಯೆನಿಸುವುದು(ಉ-ಪ. ೫೩);

(೧೦) ಅಸಂಬಂಧಾತಿಶಯೋಕ್ತಿ- ಯೋಗ (ಸಂಬಂಧ)ವಿದ್ದರೂ ಯೋಗವಿರದಂತೆ ವರ್ಣಿತವಾಗಿದ್ದರೆ ಅಸಂಬಂಧಾತಿಶಯೋಕ್ತಿಯೆನಿಸುವುದು (ಉದಾ- ಪದ್ಯ ೫೪)

(೧೧) ಅಕ್ರಮಾತಿಶಯೋಕ್ತಿ.-ಕಾರ್ಯಕಾರಣಗಳು ಏಕಕಾಲದಲ್ಲಿ ಸಂಭವಿಸಿದಂತೆ ವರ್ಣಿತವಾಗಿದ್ದರೆ ಅಕ್ರಮಾತಿಶಯೋಕ್ತಿಯೆನಿಸುವುದು. (ಉದಾ - ಪದ್ಯ ೫೫ )

(೧೨) ಚಪಲಾತಿಶಯೋಕ್ತಿ.—ಹೇತು ಪ್ರಸಕ್ತಿಮಾತ್ರದಿಂದಲೇ ಹೇತುವಿನ ಅಭಾವದಲ್ಲಿಯೂ ಕೂಡ, ಕಾರ್ಯವು ಸಿದ್ಧವಾದಂತೆ ವರ್ಣಿತವಾಗಿದ್ದರೆ! ಚಪಲಾತಿಶಯೋಕ್ತಿಯನಿಸುವುದ.;(ಇಲ್ಲಿ ಚಪಲ ಶಬ್ದಕ್ಕೆ ಸತ್ವರಾರ; ಎಂದರೆ ತಡವಿಲ್ಲದೆ ಎಂದು) ಉದಾ. ಪದ್ಯ ೫೬)

(೧೩) ಅತ್ಯಂತಾತಿಶಯೋಕ್ತಿ:—ಕಾರ್ಯಕಾರಣಗಳ ಪೌರ್ವಾಪರ್ಯವನ್ನು ವ್ಯತಿಕ್ರಮದಿಂದ (ಎಂದರೆ, ಯಾವುದು ಮೊದಲು ಬರಬೇಕೋ ಅದು ಆಮೇಲೆ ಬಂದಂತೆಯೂ ಯಾವುದು ಆಮೇಲೆ ಬರಬೇಕೋ ಅದು ಮೊದಲು ಬಂದಂತೆಯೂ) ವರ್ಣಿಸಿದ್ದರೆ ಅತ್ಯಂತಾತಿಶಯೋಕ್ತಿಯೆನಿಸುವುದು. ಉದಾ. ಪದ್ಯ ೫೭ )

(೧೪) ತುಲ್ಯಯೋಗಿತೆ:—ಪ್ರಸ್ತುತವಾಗಲಿ, ಅಪ್ರಸ್ತುತವಾಗಲೀ

ಆಗಿರುವ ವಸ್ತುಗಳ ಗುಣಕ್ರಿಯಾರೂಪವಾದ ಏಕಧರ್ಮಾನ್ವಯವು ವರ್ಣಿತವಾಗಿದ್ದರೆ ತುಲ್ಯಯೋಗಿತಾಲಂಕಾರವೆನಿಸುವುದು.

(೧) ಪ್ರಸ್ತುತಾಪ್ರಸ್ತುತೈಕಕ್ರಿಯಾನ್ವಯ (ಉದಾ-ಪದ್ಯ ೫೮);

(೨) ಅಪ್ರಸ್ತುತೈಕಗುಣಾನ್ವಯ (ಉದಾ- ಪದ್ಯ ೫೯)

(೩) ಹಿತಾಹಿತವಿಷಯಕವಾದ ವರ್ತನವು ತುಲ್ಯ (ಏಕರೂಪ) ವಾಗಿರುವಂತೆ ವರ್ಣಿತವಾಗಿದ್ದರೆ ಅದೂ ತುಲ್ಯಯೋಗಿತೆಯೆನಿಸುವುದು— (ಉದಾ:—ಪದ್ಯ ೬೦).

(೪) ವರ್ಣನೀಯವಸ್ತುವನ್ನು ಗುಣೋತ್ಕೃಷ್ಟವಸ್ತುಗಳಿಗೆ ಸಮ ಮಾಡಿ ವರ್ಣಿಸುವುದೂ ತುಲ್ಯಯೋಗಿತೆಯೆನಿಸುವುದು. (ಇದರಿಂದ ವರ್ಣನೀಯವಸ್ತುವೂ ಆ ಗುಣೋತ್ಕೃಷ್ಟವಸ್ತುಗಳಂತಿರುವುದು-ಎಂಬ ಅರ್ಥವು ಸೂಚಿತವಾಗುವುದು. (ಉದಾ—ಪ. ೬೧).

೧೫ ದೀಪಕ—(೧) ಸಮುದಿತಗಳಾದ ವರ್ಣ್ಯಾವರ್ಣ್ಯಗಳಿಗೆ ಏಕ ಧರ್ಮಾನ್ವಯವಿದ್ದರೆ ದೀಪಕಾಲಂಕಾರವೆನಿಸುವುದು.(ಉದಾ:-ಪ. ೬೨) (೨),(೩),(೪) ಪದವಾಗಲೀ ಅರ್ಥವಾಗಲೀ ಅವೆರಡೂ ಆಗಲಿ ಆವೃತ್ತಿಯಾಗಿದ್ದರೆ ಆವೃತ್ತಿ ದೀಪಕವೆನಿಸುವುದು.

(೨) ಪದಾವೃತ್ತಿದೀಪಕ (ಉದಾ-ಪ. ೬೩)

(೩) ಅರ್ಥಾವೃತ್ತಿದೀಪಕ (ಉದಾ:_ಪ. ೬೪)

(೪) ಪದಾರ್ಥಾವೃತ್ತಿದೀಪಕ (ಉದಾ:-ಪ. ೬೫)

೧೬. ಪ್ರತಿವಸ್ತೂಪಮೆ—(೧) ಉಪಮಾನೋಪಮೇಯ ವಿಷಯಕವಾದ ಎರಡು ವಾಕ್ಯಗಳಿದ್ದು ಸಮಾನವಾದ ಧರ್ಮವು ಬೇರೆ ಬೇರೆಯಾಗಿ ಎಲ್ಲಿ ನಿರ್ದೇಶಿಸಲ್ಪಡುವುದೋ ಅದಕ್ಕೆ ಪ್ರತಿವಸ್ತೂಪಮಾಲಂಕಾರವೆಂದು ಹೆಸರು. (ಉದಾ.-ಪ. ೬೬)

(೨) ವೈಧರ್ಮ್ಯದಿಂದಲೂ ಪ್ರತಿವಸ್ತೂಪಮೆಯಾಗುವುದುಂಟು (ಉದಾ.-ಪ. ೬೭)

೧೭. ದೃಷ್ಟಾಂತ— (೧) ಉಪಮಾನೋಪಮೇಯವಾಕ್ಯಗಳು ಎರಡೂ ಇದ್ದು ಅವುಗಳಲ್ಲಿಯ ಧರ್ಮವು ಭಿನ್ನವಾಗಿಯೇ ಇದ್ದರೂ

ಬಿಂಬ ಪ್ರತಿ ಬಿಂಬಭಾವದಿಂದ ನಿರ್ದಿಷ್ಟವಾಗಿದ್ದರೆ ದೃಷ್ಟಾಂತಾಲಂಕಾರವೆನಿಸುವುದು. (ಉದಾ-ಪ. ೬೮)

(೨) ವೈಧರ್ಮ್ಯದಿಂದಲೂ,ದೃಷ್ಟಾಂತಾಲಂಕಾರವೆನಿಸುವುದುಂಟು (ಉದಾ-ಪ. ೬೯)

೧೮. ನಿದರ್ಶನೆ—(೧) ಬಿಂಬ ಪ್ರತಿಬಿಂಬ ಭಾವದಿಂದ ನಿರ್ದಿಷ್ಟವಾದ ಧರ್ಮಗಳುಳ್ಳ ಎರಡು ಧರ್ಮಗಳಿಗೆ ಐಕ್ಯಾರೋಪವು ವರ್ಣಿತವಾಗಿದ್ದರೆ ನಿದರ್ಶನಾಲಂಕಾರವಾಗುವುದು (ಉದಾ-ಪ. ೭೦) (ಎಂದರೆ ಉಪಮಾನೋಪಮೇಯ ವಾಕ್ಯಾರ್ಥಗಳಿಗೆ ಐಕ್ಯಾರೋಪವಾಗುವುದು)

(೨+೩) ಎಲ್ಲಿ ಉಪಮೇಯದುದಾವಾಗಲೀ ಉಪಮಾನದುದಾಗಲೀಧರ್ಮಾರೋಪವು ತದನ್ಯತರ ಧರ್ಮಿಕವಾಗುವುದೋ ಅಲ್ಲಿ ಪದಾರ್ಥಾವೃತ್ತಿ ನಿದರ್ಶನಾಲಂಕಾರವೆಂದು ಹೆಸರು. ಇದರಲ್ಲಿ ಅವಾಂತರ ಭೇದಗಳಿರುವುವು.

(೨) ಉಪಮೇಯದಲ್ಲಿ ಉಪಮಾನಧರ್ಮಾರೋಪ(ಉದಾ-ಪ.೭೧)

(೩) ಉಪಮಾನದಲ್ಲಿ ಉಪಮೇಯಧರ್ಮಾರೋಪ ( ಉದಾ-ಪ. ೭೨)

(೪ + ೫) ಒಂದಾನೊಂದು ಕ್ರಿಯೆಯಿಂದ ಕೂಡಿದ ಒಂದು ವಸ್ತು ಸ್ವಕ್ರಿಯೆಯಿಂದ ಅಸತ್ (ಇಲ್ಲದುದು) ಸತ್ (ಇರುವುದು) ಅರ್ಥಗಳು ಬೋಧ್ಯಬೋಧಕಗಳನ್ನು ಸೂಚಿಸುವಂತೆ ವರ್ಣಿತವಾಗಿದ್ದರೆ ಅದೂ ನಿದರ್ಶನಾಲಂಕಾರವು.

(೪) ಅಸದರ್ಥಬೋಧನಾನಿದರ್ಶನಾಲಂಕಾರ (ಉದಾ-ಪ. ೭೩)

(೫) ಸದರ್ಥಬೋಧನಾನಿದರ್ಶನಾಲಂಕಾರ (ಉದಾ-ಪ. ೭೪)

೧೯. ವ್ಯತಿರೇಕ—ಉಪಮಾನೋಪಮೇಯಗಳಿಗೆ ಎಲ್ಲಿ ಭೇದವು ವರ್ಣಿಸಲ್ಪಡುವುದೋ ಅದಕ್ಕೆ ವ್ಯತಿರೇಕಾಲಂಕಾರವೆಂದು ಹೆಸರು. ಇದರಲ್ಲಿ ಮೂರು ಭೇದಗಳಿರುವುವು.

(೧) ಉಪಮೇಯಾಧಿಕ್ಯ (ಉದಾ-ಪ. ೭೫)

(೨) ಉಪಮಾನಾಧಿಕ್ಯ (ಉದಾ-ಪ. ೭೬)

(೩) ಅನುಭಯಾಧಿಕ್ಯ (ಉದಾ-ಪ. ೭೭)

ಈ ಭೇದಗಳ ಅರ್ಥಗಳು ಅವುಗಳ ಹೆಸರಿಂದಲೇ ತಿಳಿಯಬರುವವು.

೨೦. ಸಹೋಕ್ತಿ—ಎಲ್ಲಿ ಸಹಭಾವವು ಸಹೃದಯ ಹೃದಯಾಹ್ಲಾದಕವಾಗುವಂತೆ ವರ್ಣಿಸಲ್ಪಟ್ಟಿರುವುದೋ ಅದಕ್ಕೆ ಸಹೋಕ್ತಿಯೆಂದು ಹೆಸರು (ಉದಾ-ಪ. ೭೮)

೨೧. ವಿನೋಕ್ತಿ—(೧) ಯಾವುದೋ ಒಂದರ ಅಯೋಗದಿಂದ ಪ್ರಕೃತವಾದುದು ರಮ್ಯವಾಗಿಲ್ಲವೆಂದು ವರ್ಣಿಸಲ್ಪಟ್ಟದ್ದರೆ ವಿನೋಕ್ತ್ಯಲಂಕಾರವಾಗುವುದು (ಉದಾ-ಪ. ೭೯)

(೨) ಪ್ರಕೃತವಾದುದು ಯಾವುದೋ ಒಂದರ ಅಯೋಗದಿಂದ ರಮ್ಯವಾಗಿರುವುದೆಂದು ವರ್ಣಿಸಲ್ಪಟ್ಟದ್ದರೆ ಅದೂ ವಿನೋಕ್ತ್ಯಲಂಕಾರವಾಗುವುದು

೨೨. ಸಮಾಸೋಕ್ತಿ—(೧)ಪ್ರಸ್ತುತವು ವಾಚ್ಯವಾಗಿರಲು ಅಪ್ರಸ್ತುತವಾದುದರ ಪರಿಸ್ಫೂರ್ತಿಯಾದರೆ ಸಮಾಸೋಕ್ತ್ಯಲಂಕಾರವೆನಿಸುವುದು. (ಉದಾ-ಪ. ೮೦)(೨) ಸಾರೂಪ್ಯದಿಂದಲೂ ಸಮಾಸೋಕ್ತಿಯಾಗುವುದುಂಟು(ಉದಾ-ಪ. ೮೧)

೨೩. ಪರಿಕರ.—ವಿಶೇಷಣವು ಅಭಿಪ್ರಾಯಗರ್ಭಿತವಾಗಿದ್ದರೆ ಪರಿಕರಾಲಂಕಾರವಾಗುವುದು. (ಉದಾ-ಪ. ೮೨)

೨೪. ಪರಿಕರಾಂಕುರ—ವಿಶೇಷ್ಯವು ಅಭಿಪ್ರಾಯಗರ್ಭಿತವಾಗಿದ್ದರೆ ಪರಿಕರಾಂಕುರಾಲಂಕಾರವಾಗುವುದು (ಉದಾ-ಪ. ೮೩)

೨೫. ಶ್ಲೇಷ—ಅನೇಕಾರ್ಥವನ್ನು ಕೊಡಬಲ್ಲ ವಿಶೇಷಣವಿಶೇಷ್ಯ ಪದವಿನ್ಯಾಸಕ್ಕೆ ಶ್ಲೇಷವೆಂದು ಹೆಸರು. ಅದು ಮೊತ್ತಮೊದಲು,

(೧) ಪ್ರಕೃತಾನೇಕ ವಿಷಯ (ಉದಾ-ಪ. ೮೪)

(೨) ಅಪ್ರಕೃತಾನೇಕವಿಷಯ (ಉದಾ-ಪ. ೮೫)

(೩) ಪ್ರಕೃತಾಪ್ರಕೃತಾನೇಕ ವಿಷಯ (ಉದಾ-ಪ. ೮೬)

ಎಂದು ಮೂರು ವಿಧವಾಗುವುದು. ವರ್ಣನೆಯಲ್ಲಿ ಅನೇಕಾರ್ಥಗಳು ಪ್ರಕೃತವಾಗಿದ್ದರೆ (ಎಂದರೆ, ಅದಕ್ಕೇನಾದರೂ ಯುಕ್ತವಾದ ಪ್ರಯೋಜನವಿದ್ದರೆ) ಪ್ರಕೃತಾನೇಕ ವಿಷಯವೆನಿಸುವುದು. ಶ್ಲೋಕವು

ಒಂದೇ ಆದರೂ (ಪ. ೪೪) ಅದಕ್ಕೆ ಬ್ರಹ್ಮಪರವಾದ-ಅರ್ಥವೂ ಆಗಬಹುದು. ನರಸಿಂಹಪರವಾದ ಅರ್ಥವೂ ಆಗಬಹುದು. ಒಂದೊಂದರ್ಥವು ಒಂದೊಂದು ಪರವಾಗಿ ಪರಿಣಮಿಸುವುದರಿಂದ ಅದನ್ನು ಪ್ರಕೃತಾನೇಕ ವಿಷಯವೆಂದು ಕರೆವರು. ಅಪ್ರಕೃತಾನೇಕವಿಷಯ ಶ್ಲೇಷದಲ್ಲಿ ಯಾವದಾದರೂ ಒಂದರ್ಥವು ಸಾಕಾಗಿದ್ದರೂಇನ್ನೂ ಒಂದು ತೋರಿರಬರುವುದು (ಉದಾ-ಪ. ೪೫) ಇಲ್ಲಿ, ಕಣ್ಣಿಗೆ, ತಾವರೆಯು ಹೋಲಿಕೆಯಾದರೂ ಜಿಂಕೆಯು ಹೋಲಿಕೆಯಾದರೂ (ಈ ಎರಡು ಅರ್ಥಗಳೂ ಕಮಲ ಶಬ್ದಕ್ಕೆ ಇರುವವು) ಆಗಬಹುದು. ಪ್ರಕೃತಾಪ್ರಕೃತಾನೇಕವಿಷಯ ಶ್ಲೇಷದಲ್ಲಿ ಪ್ರಕರಣದಿಂದ ಗವ್ಯವಾಗುವಒಂದರ್ಥವು ಸಾಕಾಗಿದ್ದರೂ ಇನ್ನೂ ಒಂದಿರುವುದು. ಶ್ಲೇಷವು ಇನ್ನೂ ಯಾವರೀತಿಯಲ್ಲಿ ಕಾಣಬಂದರೂ ಈ ಮೂರರಲ್ಲಿ ಒಂದರಲ್ಲಿ ಅಡಕವಾಡಬಹುದು.

೨೬. ಅಪ್ರಸ್ತುತ ಪ್ರಶಂಸೆ—ಎಲ್ಲಿ ಅಪ್ರಸ್ತುತಾವೃತ್ತಾಂತವನ್ನು ವರ್ಣಿಸುವುದು ಪ್ರಸ್ತುತ ವೃತ್ತಾಂತವನ್ನು ಬೋಧಿಸುವುದರಲ್ಲಿ ಪರ್ಯವಸಾನಹೊಂದುವುದೋ ಅದಕ್ಕೆ ಅಪ್ರಸ್ತುತಾಪ್ರಶಂಸೆಯೆಂದು ಹೆಸರು. ಇದು ಐದು ವಿಧವಾಗುವುದು.

(೧) ಸಾರೂಪ್ಯನಿಬಂಧನೆ-ಬಾದರ|ವರ್ಣನೆಯಿಂದ ತತ್ಸ್ವರೂಪಾರ್ಥಲಾಭವಾಗುವುದು (ಉದಾ-ಪ. ೪೭)

(೨) ಸಾಮಾನ್ಯ ನಿಬಂಧನೆ (ಪ್ರಕೃತವಾದ ಒಂದು ಅರ್ಥವು ಹೇಳಲ್ಪಡಬೇಕಾಗಿರಲು ಅದನ್ನು ಪ್ರತ್ಯಾಯನಮಾಡುವುದಕ್ಕೆ ಸಾಮಾನ್ಯವಾದರ್ಥವೊಂದನ್ನು ವರ್ಣಿಸುವುದು (ಉದಾ-ಪ. ೪೮)

(೩) ವಿಶೇಷನಿಬಂಧನೆ--ಸಾಮಾನ್ಯವಾದ ಒಂದರ್ಥವು ಪ್ರಕೃತವಾಗಿರಲು ಅದನ್ನು ಪ್ರತ್ಯಾಯನಮಾಡುವುದಕ್ಕೆ ವಿಶೇಷಾರ್ಥವೊಂದನ್ನು ವರ್ಣಿಸುವುದು (ಉದಾ-ಪ. ೪೯)

(೪) ಕಾರಣನಿಬಂಧನೆ-ಪ್ರಕರಣಕ್ಕೆ ಸಂಬಂಧಪಡದ ಒಂದು ಕಾರಣವನ್ನು ಕಲ್ಪಿಸಿಕೊಂಡು ಅದರ ಕಾರ್ಯವನ್ನು ವರ್ಣನೆ ಮಾಡುವುದು ಪ್ರಸ್ತುತವಾಗಿದ್ದರೆ ಕಾರಣನಿಬಂಧನೆಯೆನಿಸುವುದು(ಉದಾ-ಪ.೯೦)

(೫) ಕಾರ್ಯನಿಬಂಧನೆ-ಪ್ರಕರಣಕ್ಕೆ ಸಂಬಂಧಪಡುವ ಒಂದು ಕಾರಣವನ್ನಿಟ್ಟುಕೊಂಡು ಅದರ ಕಾರ್ಯರೂಪವಾದಂತೆ ಅಪ್ರಸ್ತುತವಾದುದೊಂದು ಅರ್ಥವನ್ನು ವರ್ಣಿಸುವುದು (ಉದಾ-ಪ. ೯೧)

ಕಾರ್ಯಕಾರಣಗಳು ಕವಿಕಲ್ಪಿತವೂ ಆಗಬಹುದಾದುದರಿಂದ

(೬) ಕವಿಕಲ್ಪಿತಕಾರಣನಿಬಂಧನೆ (ಉದಾ-ಪ ೯೨)

(೭) ಕವಿಕಲ್ಪಿತಕಾರ್ಯನಿಬಂಧನೆ (ಉದಾ-ಪ. ೯೩)

ಎಂಬ ಇನ್ನೂ ಎರಡು ಭೇದಗಳಾಗುವುವು.

೨೩ ಪ್ರಸ್ತುತಾಂಕುರ.— ವರ್ಣಿತವಾದ ಒಂದರ್ಥವು ಪ್ರಸ್ತುತವಾಗಿರಲು ಅದರಿಂದ ಪ್ರಸ್ತುತವೇ ಆದ ಮತ್ತೊಂದರ್ಥವು ವ್ಯಕ್ತವಾಗಿದ್ದರೆ ಪ್ರಸ್ತುತಾಂಕುರಾಲಂಕಾರವೆನಿಸುವುದು. (ಅದು, ಗಮ್ಯಗಮಕ--ಭಾವಸಂಬಂಧವಿಲ್ಲದೆ ಆಗಲಾರದುದರಿಂದ ಉಪಮಾನೋಪಮೇಯಭಾವಸಂಬಂಧವೇ ಇರುವುದೆಂದು ತಿಳಿಯಬೇಕು ) ಇದರಲ್ಲಿ ಸಾರೂಪ್ಯ ನಿಬಂಧನೆಯೇ ಪ್ರಧಾನವಾದುದು। (ಉದಾ-ಪ. ೯೪) ಸಂಬಂಧಾನಂತರ ನಿಬಂಧನೆಗಳೂ ಇರುವುವು. ದಿಂಙ್ಮಾತ್ರವಾಗಿ ಅವುಗಳಲ್ಲಿ ಎರಡು ಭೇದಗಳಿಗೆ ಲಕ್ಷ್ಯಗಳನ್ನು ಕಲ್ಪಿಸಿರುವೆವು (ಉದಾ-ಪ.೯೫-೯೬) ಎಲ್ಲಿ ಕಾರ್ಯದಿಂದ ಕಾರಣವು ದ್ಯೋತಿತವಾಗುವಂತೆ ವರ್ಣಿಸಲ್ಪಡುವುದೋ ಅಲ್ಲಿ ಈ ಅಲಂಕಾರವಲ್ಲ; ಅದನ್ನು ಅನುಮಾನಾಲಂಕಾರವೆಂದೇ ತಿಳಿಯಬೇಕು.

೨೪. ಪರ್ಯಾಯೋಕ್ತ—(೧)ಗಮ್ಯವಾದ ಯಾವ ಅರ್ಥವೇ ವಿವಕ್ಷಿತವಾಗಿರಲು ಅದನ್ನೇ ಭಂಗ್ಯಂತರದಿಂದ ವಿವಕ್ಷಿತರೂಪಕ್ಕೂ ಚಾರುತರವಾದ!ರೂಪಾಂತರದಿಂದ ವರ್ಣಿಸಲ್ಪಡುವುದೋ ಅದು ಪರ್ಯಾಯೋಕ್ತವೆನಿಸುವುದು ಇದು ಭಂಗ್ಯಂತರಾಶ್ರಯುವಾಯಿತು (ಉದಾ-ಪ. ೯೭)

(೨) ಯಾವುದೋ ಒಂದು ಕಾರ್ಯವ್ಯಾಜದಿಂದ ಇಷ್ಟಾರ್ಥಲಾಭಕ್ಕೆ ಬಾಧಕವಾಗಿರುವುದನ್ನು ಹೋಗಲಾಡಿಸಿ ಇಷ್ಟಾರ್ಥವು ಲಭಿಸುವಂತೆ ಮಾಡುವುದು ವರ್ಣಿತವಾಗಿದ್ದರೆ ಅದೂ ಪರ್ಯಾಯೋಕ್ತವೇ ಆಗುವುದು ಹೀಗಿದ್ದರೆ ವ್ಯಾಜಬದ್ಧಪರ್ಯಾಯೋಕ್ತವೆನಿಸುವುದು (ಉದಾ-ಪ. ೯೮)

೨೫. ವ್ಯಾಜಸ್ತುತಿ—ನಿಂದೆಯಿಂದ ಸ್ತುತಿಯೂ ಸ್ತುತಿಯಿಂದ

ನಿಂದೆಯೂ ವ್ಯಕ್ತವಾಗುವಂತೆ ವರ್ಣಿಸಿದ್ದರೆ ವ್ಯಾಜಸ್ತುತ್ಯಲಂಕಾರವಾಗುವುದು

(೧) ನಿಂದೆಯಿಂದ ಸ್ತುತಿ (ಉದಾ-ಪ. ೯೯)

(೨) ಸ್ತುತಿಯಿಂದ ನಿಂದೆ (ಉದಾ-ಪ. ೧೦೦)

ಈ ಚಮತ್ಕಾರವು ಭಿನ್ನವಿಷಯಗತವಾಗಿಯೂ ಇರುವುದುಂಟು.

(೩) ಭಿನ್ನವಿಷಯಗತನಿಂದಾಸ್ತುತಿ (ಉದಾ-ಪ. ೧೦೧)

(೪) ಭಿನ್ನವಿಷಯಗತಸ್ತುತಿನಿಂದೆ (ಉದಾ-ಪ, ೧೦೨)

(೫) ಒಂದರ ಸ್ತುತಿಯಿಂದ ಬೇರೊಂದರ ಸ್ತುತಿಯೂ ವ್ಯಕ್ತವಾಗಬಹುದು (ಉದಾ-ಪ, ೧೦೪)

೩೦ ವ್ಯಾಜನಿಂದೆ—ಎಲ್ಲಿ ಅಪ್ರಸ್ತುತವಾದ ಒಂದರ ನಿಂದೆ ಪ್ರಸ್ತುತವಾದ ಬೇರೊಂದರ ನಿಂದೆಯಾಗಿ ಪರ್ಯವಸಾನ ಹೊಂದುವುದೋ ಅದಕ್ಕೆ ವ್ಯಾಜನಿಂದೆಯೆಂದು ಹೆಸರು (ಉದಾ-ಪ, ೧೦೩)

೩೧, ಆಕ್ಷೇಪ—(೧) ಒಂದರ್ಥವು ಉಕ್ತವಾಗಲು ಆಲೋಚನೆಯಿಂದ ಅದರ ವೈಯರ್ಥ್ಯವು ಕಾಣಬಂದು ಆ ಉಕ್ತಾರ್ಥವು ಪ್ರತಿಷೇಧಿಸಲ್ಪಟ್ಟದ್ದರೆ (ಎಂದರೆ, ಅದು ಬೇಡವೆಂದು ಹೇಳಿದ್ದರೆ) ಆಕ್ಷೇಪಾಲಂಕಾರವಾಗುವುದು (ಉದಾ-ಪ, ೧೦೫)

(೨) ಎಲ್ಲಿ ಒಂದು ನಿಷೇಧವು ಅನುಪಪದ್ಯಮಾನವಾಗಿ ಆಭಾಸರೂಪ ಹೊಂದುತ್ತಿದ್ದರೂ ನಿಷೇಧಿಸಲ್ಪಡುವುದರಲ್ಲಿ ನಿಷ್ಠವಾಗಿರುವ ವಿಶೇಷಾರ್ಥಕ್ಕೆ ಪ್ರತೀತಿಕಾರಿಯಾಗಿರುವಂತೆ ವರ್ಣಿಸಲ್ಪಡುವುದೋ ಅದೂ ಆಕ್ಷೇಪಾಲಂಕಾರವು (ಉದಾ-ಪ, ೧೦೬) (ಇಲ್ಲಿ ನಿಷೇಧವೆಂದರೆ 'ಇಲ್ಲ 'ಅಲ್ಲ' ಎಂಬ ಅನಂಗೀಕಾರಾರ್ಥವು ದ್ಯೋತಿತವಾಗುವಂತಿರುವುದು ಎಂದರ್ಥವು)

(೩) ಎಲ್ಲಿ, ವಿಧಿ (ವಿಧಿಯೆಂದರೆ, 'ಮಾಡು' 'ಆಗಬಹುದು' ಇತ್ಯಾದ್ಯಂಗೀಕಾರಾರ್ಥವನ್ನು ಕೊಡುವುದೆಂದರ್ಥವು) ಶಬ್ದದಿಂದ ಪ್ರತಿಪಾದಿತವಾಗಿದ್ದರೂ ಅದರಲ್ಲಿ ಅನಿಷ್ಟವು ಗೋಚರವಾಗಿ ಅನುಪಪದ್ಯಮಾನವಾಗಲು ವಿಧಿವಿಷಯಕವಾದ ನಿಷೇಧವು ಗಮ್ಯವಾದರೆ ಅದೂ ಆಕ್ಷೇಪಾಲಂಕಾರವೆನಿಸುವುದು (ಉದಾ-ಪ. ೧೦೭)

೩೨ ವಿರೋಧಾಭಾಸ—(ವಿರೋಧವೆಂದರೆ ಒಂದರ ಅಭಾವತ್ವ ಅದರ ಅಭಾವವ್ಯಾಪ್ಯತೆಯೂ ಆಗಬಹುದು, ಆಭಾಸವೆಂದರೆ ಅನುಪಪದ್ಯಮಾನತ್ವ) ಆ-ಆ ಅಭಾವಗಳಾಗಲೀ,ಆ-ಆ ಅಭಾವವ್ಯಾಪ್ಯಗಳಾಗಲೀ ಒಂದೇ ಸ್ಥಳದಲ್ಲಿ ಇರುವುದು ಸಾಧ್ಯವಲ್ಲದಿದ್ದರೂ ಅವು ಯಾವ ಸ್ಥಳದಲ್ಲಿ ಸಾಧ್ಯವಾಗಿರುವಂತೆ ವರ್ಣಿತವಾಗಿರುವುದೋ ಅಲ್ಲಿ ವಿರೋಧಾಭಾಸಾಲಂಕಾರವೆಂದು ಹೆಸರು (ಉದಾ-ಪ. ೧೦೮)

೩೩ ವಿಭಾವನೆ—ಎಂದರೆ ಕಾರ್ಯೋತ್ಪತ್ತಿಗೆ ತಕ್ಕ ಕಾರ್ಯಸಂಪತ್ತಿಯಿಲ್ಲದಿರುವುದು, ಇದರಲ್ಲಿ ಅನೇಕ ಭೇದಗಳಿರುವುವು

(೧) ಕಾರಣವಿಲ್ಲದೆಯೇ ಕಾರ್ಯಹುಟ್ಟುವುದು; (ಉದಾ-ಪ,೧೯)

(೨) ಕಾರಣವು ಸಮಗ್ರವಾಗಿರದಿದ್ದರೂ ಕಾರ್ಯವು ಹುಟ್ಟುವುದು (ಉದಾ-ಪ, ೧೧೦)

(೩) ಪ್ರತಿಬಂಧಕವಿದ್ದರೂ ಕಾರ್ಯವು ಹುಟ್ಟುವುದು (ಉದಾ--ಪ, ೧೧೧)

(೪) ಕಾರಣವಲ್ಲದುದರಿಂದ ಕಾರ್ಯವು ಹುಟ್ಟುವುದು (ಉದಾ-_ಪ, ೧೧೨)

(೫) ವಿರುದ್ಧಕಾರಣದಿಂದ ಕಾರ್ಯವು ಹುಟ್ಟುವುದು(ಉದಾ-ಪ.೧೧೩)

(೬) ಕಾರ್ಯದಿಂದಲೇ ಕಾರಣವುಂಟಾಗುವುದು (ಉದಾ-ಪ. ೧೧೪)

೩೪. ವಿಶೇಷೋಕ್ತಿ—ಕಾರಣವು ಪುಷ್ಕಳವಾಗಿದ್ದರೂ ಕಾರ್ಯವು ಹುಟ್ಟದಿದ್ದಂತೆ ವರ್ಣಿತವಾಗಿದ್ದರೆ ವಿಶೇಷೋಕ್ತಿಯೆಂದು ಹೆಸರು (ಉದಾ-ಪ. ೧೧೫)

೩೫. ಅಸಂಭವ—ಒಂದು ಕಾರ್ಯವು ದುಷ್ಕರವಾಗಿರುವುದರಿಂದ ಅಘಟಮಾನವಾಗಿರಲು ಅದರ ನಿಷ್ಪತ್ತಿಯ(ನಿಷ್ಪತ್ತಿಯೆಂದರೆ ಹುಟ್ಟುವುದು) ದುಷ್ಕರತ್ವವನ್ನು ಖ್ಯಾಪನಮಾಡಿದ್ದರೆ ಅಸಂಭವಾಲಂಕಾರವಾಗುವುದು (ಉದಾ-ಪ. ೧೧೬)

೩೬. ಅಸಂಗತಿ—(೧) ಕಾರ್ಯಕಾರಣಗಳು (ಅವುಗಳಿಗೆ ಸಮಾನಾಧಿಕರಣ್ಯವೇ ನಿಯಮವಾಗಿದ್ದರೂ) ಭಿನ್ನದೇಶಗತವಾಗಿರುವಂತೆ ವರ್ಣಿವಾಗಿದ್ದರೆ ಅಸಂಗತ್ಯಲಂಕಾರವೆನಿಸುವುದು (ಉದಾ-ಪ. ೧೧೭)

(೨) ಒಂದು ಸ್ಥಳದಲ್ಲಿ ಮಾಡಬೇಕಾಗಿದ್ದುದನ್ನು ತದ್ಭಿನ್ನವಾದ ಸ್ಥಳದಲ್ಲಿ ಮಾಡಿದಂತೆ ವರ್ಣಿತವಾಗಿದ್ದರೆ ಅದೂ ಅಸಂಗತಿ (ಉದಾ-ಪ.೧೧೮)

(೩) ಒಂದನ್ನು ಮಾಡುವುದಕ್ಕೆ ಹೊರಟು ತದ್ವಿರುದ್ಧಕಾರ್ಯವನ್ನು ಮಾಡಿದರೆ ಅದೂ ಅಸಂಗತಿಯೇ (ಉದಾ-ಪ. ೧೧೯)

೩೭. ವಿಷಮ—(೧) ಅನನುರೂಪಾರ್ಥಗಳಿಗೆ ಎಲ್ಲಿ ಘಟನವು ವರ್ಣಿತವಾಗುವುದೋ ಅದು ವಿಷಮಾಲಂಕಾರವೆನಿಸುವುದು ( ಉದಾ-ಪ. ೧೨೦)

(೨) ಕಾರಣವು ಯಾವ ರೂಪವುಳ್ಳದೋ ತದ್ವಿರುದ್ಧರೂಪವುಳ ಕಾರ್ಯೋತ್ಪತ್ತಿ ವರ್ಣಿತವಾಗಿದ್ದರೆ ಅದೂ ವಿಷಮಾಲಂಕಾರವು (ಉದಾ-ಪ. ೧೨೧)

(೩) ವ್ಯಾಪಾರವು ಇಷ್ಟಪ್ರಾಪ್ತಿಗೆ ಅನುಕೂಲವಾಗಿದ್ದರೂ ಇಷ್ಟವು ಲಭಿಸದೆ ಅನಿಷ್ಟಾವಾಪ್ತಿಯಾಗಿದ್ದರೆ ಅದೂ ವಿಷಮಾಲಂಕಾರವು (ಉದಾ-ಪ.೧೨೨)

(೪) ಒಂದಕ್ಕೆ ಉಳಿಗಾಲವಿಲ್ಲದೆ ಮತ್ತೊಂದನ್ನು ಆಶ್ರಯಿಸಲು ಅದಕ್ಕೂ ಆಶ್ರಯವಾದುದಕ್ಕೂ ಅನಿಷ್ಟಾವಾಪ್ತಿಯಾದರೆ ಅದೂ ವಿಷಮಾಲಂಕಾರವು (ಉದಾ-ಪ. ೧೨೩)

(೫) ಪರಾನಿಷ್ಟಕ್ಕೆ ಯತ್ನಿಸಲು ತನಗೇ ಅನಿಷ್ಟಾವಾಪ್ತಿಯಾಗುವುದೂ ಒಂದು ಭೇದವು (ಉದಾ-ಪ. ೧೨೪)

ಪರಾನಿಷ್ಟಕ್ಕೆ ಯತ್ನಿಸಲು ತನಗೂ ಅದಕ್ಕೂ ಅನಿಷ್ಟಾವಾಪ್ತಿಯಾಗುವುದೆಂದು ಇದೇ ಭೇದವೆಂದು ಕುವಲಯಾನಂದಮತವು. ಆದರೂ ಅಲ್ಲಿ ಕೊಡುವ ಉದಾಹರಣೆಯಿಂದ ಮೇಲೆ ಹೇಳಿದ ಅರ್ಥವು ಸೂಚಿತವಾಗುವುದೆಂದು ಹೇಳುವರ ಮತವನ್ನು ಅಂಗೀಕರಿಸಿ ನಾವು ತದನುಕೂಲವಾದ ಲಕ್ಷ್ಯವನ್ನು ಕಲ್ಪಿಸಿರುವೆವು.

(೬) ಕಾರ್ಯಕ್ಕೆ ಯತ್ನಿಸಿದರೆ ಕೇವಲಾನಿಷ್ಟವೇ ಪ್ರಾಪ್ತಿಯಾಗುವುದೂ ಒಂದು ಭೇದವು (ಉದಾ-ಪ. ೧೨೫)

(೭) ಕೇವಲೇಷ್ಟಾನವಾಪ್ತಿಯೂ ಒಂದು ಭೇದವು (ಉದಾ-ಪ. ೧೨೬)

(೯) ಸರ್ವಥೇಷ್ಟಾನವಾಪ್ತಿಯೂ ಒಂದು ಭೇದವು (ಉದಾ—ಪ. ೧೨೮)

(೧೦) ಯಾವಾಗಲೋ ಒಂದುವೇಳೆ ಇಷ್ಟಪ್ರಾಪ್ತಿಯಾದರೂ ಇಷ್ಟಪ್ರಾಪ್ತಿಯಾಗದೆಯೇ ಇರುವುದು (ಉದಾ-೧೨೯)

(೧೧) ಇಷ್ಟಪ್ರಾಪ್ತಿಯಾಗದಿದ್ದರೂ ಅದು ಪ್ರಾಪ್ತವಾದಂತೆ ಭ್ರಮಿಸುವಿಕೆಯನ್ನು ವರ್ಣಿಸುವುದು (ಉದಾ-ಪ. ೧೩೦)

೪೮. ಸಮ—(೧) ಅನುರೂಪವಾದ ಎರಡು ವಸ್ತುಗಳ ಸಮಾಗಮವು ವರ್ಣಿತವಾಗಿದ್ದರೆ ಸಮಾಲಂಕಾರವಾಗುವುದು(ಉದಾ-ಪ. ೧೩೧)

(೨) ಕಾರ್ಯಕಾರಣಗಳ ಸಾರೂಪ್ಯ (ಸಮಾನುಗುಣತ್ವ)ವು ವರ್ಣಿತವಾಗಿದ್ದರೆ ಅದೂ ಸಮಾಲಂಕಾರವು (ಉದಾ-ಪ. ೧೩೨)

(೩) ಯಾವ ಇಷ್ಟಸಿದ್ಧಿಗಾಗಿ ಕರ್ತೃವಿನ ವ್ಯಾಪಾರವೋ ಅದು ಅನಿಷ್ಟವಿಲ್ಲದೆ ಇಷ್ಟಸಿದ್ಧಿಗೆ ಸಾಧಕವಾದರೆ ಅದೂ ಸಮಾಲಂಕಾರವು(ಉದಾ-ಪ. ೧೩೩)

೪೯. ವಿಚಿತ್ರ—ಯಾವ ಕಾರಣಕ್ಕೆ ಯಾವ ಫಲವೋ ಆ ಕಾರಣದಿಂದ ತದ್ವಿಪರೀತಫಲವಾದಂತೆ ವರ್ಣಿತವಾಗಿದ್ದರೆ ವಿಚಿತ್ರಾಲಂಕಾರವು (ಉದಾ-ಪ. ೧೩೪)

(ಯಾವ ವ್ಯಾಪಾರದಿಂದ ಯಾವ ಫಲವು ಹುಟ್ಟಬೇಕೋ ತದ್ವಿಪರೀತಫಲನಿಷ್ಪತ್ತಿಯನ್ನು ಉದ್ದೇಶಿಸಿ ಅದೇ ವ್ಯಾಪಾರಕ್ಕೆ ತೊಡಗುವುದರಿಂದ ವಿಚಿತ್ರವೆಂಬ ಹೆಸರು ಅನ್ವರ್ಥವಾಗುವುದು)

೫೦. ಅಧಿಕ—(೧) ಆಧಾರವು ದೊಡ್ಡದಾಗಿದ್ದರೂ ಆಧೇಯವು ಅದಕ್ಕೂ ದೊಡ್ಡದೆಂದು ವರ್ಣಿಸಿದ್ದರೆ ಅಧಿಕಾಲಂಕಾರವಾಗುವುದು (ಉದಾ-ಪ. ೧೩೫)

(೨) ಯಾವ ಆಧೇಯವು ದೊಡ್ಡದೆಂದು ಪ್ರಸಿದ್ಧವಾಗಿರುವುದೋ ಆಧಾರವು ಅದಕ್ಕೂ ದೊಡ್ಡದೆಂದು ವರ್ಣಿಸುವುದೂ ಅಧಿಕಾಲಂಕಾರವು (ಉದಾ-ಪ. ೧೩೬)

೫೧. ಅಲ್ಪ—ಎಲ್ಲಿ ಆಧೇಯದ ಸೂಕ್ಷ್ಮತೆ ಆಧಾರಸೌಕ್ಷ್ಮ್ಯಪರ್ಯವಸಾಯಿಯಾಗುವುದೋ ಅದು ಅಲ್ಪಾಲಂಕಾರವು (ಉದಾ- ಪ. ೧೩೭)

೪೨. ಅನ್ಯೋನ್ಯ—ಎರಡು ವಸ್ತುಗಳ ಸದ್ಭಾವವಾಗಲೀ, ವ್ಯಾಪಾರವಾಗಲೀ ಪರಸ್ಪರವಾಗಿ ಉಪಕಾರಜನಕವಾಗುವಂತೆ ವರ್ಣಿತವಾಗಿದ್ದರೆ ಅನ್ಯೋನ್ಯಾಲಂಕಾರವೆನಿಸುವುದು (ಉದಾ-ಪ, ೧೩೮)

೪೩ ವಿಶೇಷ—(೧) ಪ್ರಸಿದ್ಧವಾದ ಆಧಾರವಿಲ್ಲದಿದ್ದರೂ ಆಧೇಯ ಸದ್ಭಾವವು ವರ್ಣಿಸಲ್ಪಟ್ಟರೆ ವಿಶೇಷಾಲಂಕಾರವು (ಉದಾ-ಪ, ೧೩೯)

(೨) ಒಂದೇವಸ್ತು ಅನೇಕಾಧಾರಗಳಲ್ಲಿ ಸ್ಥಿತವಾಗಿರುವಂತೆ ವರ್ಣಿತವಾಗಿದ್ದರೂ ವಿಶೇಷಾಲಂಕಾರವಾಗುವುದು (ಉದಾ-ಪ. ೧೪೦)

(೩) ಕಾರ್ಯಾನುಕೂಲ ಯತ್ನವು ಸ್ವಲ್ಪವೇ ಆಗಿದ್ದರೂ ಅಶಕ್ಯವಾದ ವಸ್ತ್ವಂತರವು ಸಾಧಿತವಾದಂತೆ ವರ್ಣಿತವಾಗಿದ್ದರೂ ವಿಶೇಷಾಲಂಕಾರವೇ (ಉದಾ-ಪ. ೧೪೧)

೪೪. ವ್ಯಾಘಾತ—(೧) ಯಾವುದು ಯಾವುದಕ್ಕೆ ಸಾಧನವೆಂದು ಲೋಕಪ್ರಸಿದ್ಧವಾಗಿರುವುದೋ ತದ್ವಿರುದ್ಧ ಕಾರ್ಯಕ್ಕೆ ಯಾವನಾದರೂ ಅದನ್ನು ಸಾಧನವಮಾಡಿಕೊಂಡಂತೆ ವರ್ಣಿತವಾಗಿದ್ದರೆ ವ್ಯಾಘಾತಾಲಂಕಾರವು (ಉದಾ-ಪ. ೧೪೨)

(೨) ಒಬ್ಬನು ಒಂದು ವಸ್ತುವನ್ನು ಒಂದು ಕಾರ್ಯಕ್ಕೆ ಸಾಧನವೆಂದು ಅಂಗೀಕರಿಸಿರಲು ಅವನಿಗೆ ಪ್ರತಿದ್ವಂದ್ವಿಯಾದವನು ತದ್ವಿರುದ್ಧ ಕಾರ್ಯಕ್ಕೆ ಅದನ್ನೇ ಸಾಧನವಮಾಡಿಕೊಂಡಂತೆ ವರ್ಣಿತವಾಗಿದ್ದರೆ ಅದೂ ವ್ಯಾಘಾತಭೇದವು (ಉದಾ-ಪ. ೧೪೩)

(೩) ಒಂದು ಕಾರ್ಯಕ್ಕೆ ನಿಷ್ಪಾದಕವಾಗುವುದೆಂದು ಒಬ್ಬನಿಂದ ಸಂಭಾವಿತವಾದ ವಸ್ತುವಿನಿಂದ ಆ ಕಾರ್ಯ ವಿರೋಧಿಯಾದಕಾರಣವಾಗಿ ಸೌಕರ್ಯದಿಂದ ಸಮರ್ಥಿಸಲ್ಪಡುವುದಾದರೆ ಅದೂ ಒಂದು ವ್ಯಾಘಾತಭೇದವು (ಉದಾ-ಪ. ೧೪೪)

೪೫. ಕಾರಣಮಾಲೆ—ಪೂರ್ವಪೂರ್ವವಾದುದು ಉತ್ತರೋತ್ತರಕ್ಕೆ ಕಾರಣವಾಗಿಯಾಗಲೀ (ಉದಾ-ಪ. ೧೪೫) ಉತ್ತರೋತ್ತರವಾದುದು ಪೂರ್ವಪೂರ್ವಕ್ಕೆ ಕಾರಣವಾಗಿಯಾಗಲೀ (ಉದಾ-ಪ. ೧೪೬) ಇರುವಂತೆ ಜೋಡಿಸಲ್ಪಟ್ಟು ವರ್ಣಿತವಾಗಿದ್ದರೆ ಕಾರಣಮಾಲೆಯೆನಿಸುವುದು.

೪೬. ಏಕಾವಳಿ—(೧) ಉತ್ತರೋತ್ತರವಾದುದು ಪೂರ್ವಪೂರ್ವಕ್ಕೆ ವಿಶೇಷಣ ಭಾವವನ್ನು ವಹಿಸಿದ್ದರೂ (ಉದಾ-ಪ. ೧೪೭-೧೪೮) (೨) ಪೂರ್ವಪೂರ್ವವಾದುದೇ ಉತ್ತರೋತ್ತರವಾಗಿರುವುದಕ್ಕೆ ವಿಶೇಷಣಭಾವವನ್ನು ವಹಿಸಿದ್ದರೂ (ಉದಾ-ಪ. ೧೪೯)ಒಂದರಿಂದ ಆರಂಭಿಸಿ ಒಂದಕ್ಕೊಂದನ್ನು ಕೊಕ್ಕೆಯಂತೆ ಸೇರಿಸಿಕೊಂಡು ಬಂದಿದ್ದರೆ ಏಕಾವಳ್ಯಲಂಕಾರವೆನಿಸುವುದು.

೪೭. ಮಾಲಾದೀಪಕ—ದೀಪಕವೂ ಏಕಾವಳಿಯೂ ಸಂಕಲಿತವಾಗಿದ್ದರೆ ಮಾಲಾದೀಪಕವೆನಿಸುವುದು (ಉದಾ-ಪ. ೧೫೦)

೪೮. ಸಾರ—ಉತ್ತರೋತ್ತರ ಬರುವುದು ಪೂರ್ವಪೂರ್ವವಾದುದಕ್ಕೆ ಉತ್ಕೃಷ್ಟತರವಾದುದಾಗಿ ವರ್ಣಿತವಾಗಿದ್ದರೆ ಸಾರಾಲಂಕಾರವೆನಿಸುವುದು. ಇದರಲ್ಲಿ—

(೧) ಶ್ಲಾಘ್ಯಗುಣೋತ್ಕರ್ಷ (ಉದಾ-ಪ. ೧೫೧)

(೨) ಅಶ್ಲಾಘ್ಯಗುಣೋತ್ಕರ್ಷ (ಉದಾ-ಪ. ೧೫೨)

(೩) ಉಭಯರೂಪ (ಉದಾ-ಪ. ೧೫೩)

ಎಂದು ಮೂರುಬೇದಗಳಿರುವುವು.

೪೯. ಯಥಾಸಂಖ್ಯಾ—ಕ್ರಮವಾಗಿ ಎರಡು ಸಮುದಾಯಗಳಿದ್ದು ಒಂದುಸಮುದಾಯದ ಭಾಗಗಳು ಇನ್ನೊಂದು ಸಮುದಾಯದ ಭಾಗಗಳೊಡನೆ ಉಕ್ತಕ್ರಮದಲ್ಲಿಯೇ ಅನ್ವಯಿಸುವುದಾದರೆ ಯಥಾಸಂಖ್ಯಾಲಂಕಾರವೆನಿಸುವುದು (ಉದಾ-ಪ, ೧೫೪)

೫೦. ಪರ್ಯಾಯ—ಒಂದೇ ಅರ್ಥಕ್ಕೆ ಪರ್ಯಾಯವಾಗಿ ಅನೇಕಾಧಾರಸಂಶಯವಿದ್ದರೆ ಪರ್ಯಾಯಾಲಂಕಾರವಾಗುವುದು. ಇದರಲ್ಲಿ ಅನೇಕ ಭೇದಗಳಿರುವುವು.

(೧) ಶಾಬ್ದಪರ್ಯಾಯ-ಇದರಲ್ಲಿ ಪ್ರಾಯಕವಾಗಿ ಪರ್ಯಾಯವು ಶಬ್ದದಿಂದ ವ್ಯಕ್ತವಾಗುವುದು. (ಉದಾ-ಪ ೧೫೫)

(೨) ಶುದ್ಧಪರ್ಯಾಯ-ಇದೂ ಶಬ್ದಪರ್ಯಾಯದ ಭೇದವೇ (ಉದಾ-ಪ. ೧೫೬)

(೩) ಸಂಕೋಚಪರ್ಯಾಯ- ಎಂದರೆ ಒಂದುವಸ್ತು, ಬರುತಬರುತ

ಸಂಕುಚಿತವಾದಂತೆ ವರ್ಣಿತವಾಗಿರುವುದು (ಉದಾ-ಪ. ೧೫೭)

(೪) ವಿಕಾಸಪರ್ಯಾಯ-ಎಂದರೆ ಒಂದು ವಸ್ತು ಬರುತ ಬರುತ ಹೆಚ್ಚಿದಂತೆ ವರ್ಣಿತವಾಗಿರುವುದು (ಉದಾ-ಪ, ೧೫೮)

(೫) ಒಂದೇವಸ್ತುವಿನಲ್ಲಿ ಅನೇಕವೃತ್ತಿಗಳು ಪರ್ಯಾಯದಿಂದ ವರ್ಣಿತವಾಗಿದ್ದರೆ ಅದೂ ಪರ್ಯಾಯಾಲಂಕಾರವು (ಉದಾ-ಪ, ೧೫೯)

೫೧. ಪರಿವೃತ್ತಿ—ನ್ಯೂನಾಧಿಕವಸ್ತುಗಳಿಗೆ ಪರಸ್ಪರವಾಗಿ ವಿನಿಮಯವಿದ್ದರೆ ಪರಿವೃತ್ತ್ಯಲಂಕಾರವೆನಿಸುವುದು (ಉದಾ-ಪ. ೧೬೦)

೫೨ ಪರಿಸಂಖ್ಯೆ—ಒಂದು ಧರ್ಮವನ್ನು ಒಂದೆಡೆಯಲ್ಲಿಲ್ಲವೆಂದು ಹೇಳಿ ಅದನ್ನು ಮತ್ತೊಂದೆಡೆಗೆ ತೆಗೆದುಕೊಂಡು ಹೋದರೆ ಪರಿಸಂಖ್ಯಾಲಂಕಾರವೆನಿಸುವುದು (ಇಲ್ಲಿ, ಇಲ್ಲವೆಂದು ಹೇಳುವುದಕ್ಕೆ ನಿಷೇಧವೆಂದೂ ಮತ್ತೊಂದೆಡೆಗೆ ತೆಗೆದುಕೊಂಡು ಹೋಗುವುದಕ್ಕೆ ನಿಯಂತ್ರಣವೆಂದೂ ಸಂಕೇತವು)

(೧) ನಿಷೇಧವು ಶಬ್ದದಿಂದ ತೋರಬರಬಹುದು (ಉದಾ-ಪ. ೧೬೧)

(೨) ಅರ್ಥದಿಂದ ತೋರಬರಬಹುದು (ಉದಾ-ಪ, ೧೬೨)

೫೩. ವಿಕಲ್ಪ—ಪರಸ್ಪರ ನಿರಪೇಕ್ಷಗಳಾದ ಎರಡು ಪದಾರ್ಥಗಳು ತುಲ್ಯಬಲಗಳಾಗಿಯೂ ಪರಸ್ಪರ ವಿರುದ್ಧಗಳಾಗಿಯೂ ಇರಲು ಅವುಗಳಲ್ಲಿ ಯಾವುದಾದರೂ ಒಂದರ ಪ್ರಾಪ್ತಿಯಿಂದ ಮತ್ತೊಂದರ ಪ್ರತಿಕ್ಷೇಪವಾದರೆ ವಿಕಲ್ಪಾಲಂಕಾರವೆನಿಸುವುದು (ಉದಾ-ಪ. ೧೬೩)

೫೪. ಸಮುಚ್ಚಯ—(೧) ಅನೇಕ ಪದಾರ್ಥಗಳು ಏಕಕಾಲದಲ್ಲಿ ಬರುವ ಹಾಗಿರಲು ಅವೆಲ್ಲವನ್ನೂ ಒಂದೇ ಸ್ಥಳದಲ್ಲಿ ನಿಬಂಧನೆ ಮಾಡುವುದು ಸಮುಚ್ಚಯಾಲಂಕಾರವೆನಿಸುವುದು. ಇದು ಪ್ರಥಮಭೇದವು (ಉದಾ-ಪ. ೧೬೪)

(೨) ಅನೇಕ ಕಾರಣಗಳು ಅನ್ಯೋನ್ಯವಾಗಿ ನಾನು ಮೊದಲು ನಾನು ಮೊದಲು ಎನ್ನುವ ಹಾಗೆ (ಅಹಂಪ್ರಥಮಿಕಯಾ) ಏಕಕಾಲದಲ್ಲಿ ಒಂದೇ ಕಾರ್ಯಸಾಧನಕ್ಕೆ ಹೊರಟಂತಿದ್ದರೆ ಅದೂ ಸಮುಚ್ಚಯಾಲಂಕಾರವು. ಇದು ದ್ವಿತೀಯಭೇದವು (ಉದಾ-ಪ. ೧೬೫)

೫೫. ಕಾರಕದೀಪಕ—ಒಂದೇ ಕಾರಕಕ್ಕೆ ಸಂಬಂಧಪಟ್ಟ ನಿ

ಯತಕ್ರಮವಿಲ್ಲದಿರುವ ಗುಣಕ್ರಿಯಾರೂಪ ಧರ್ಮಗಳ ಗುಂಫವು ಕಾರಕ ದೀಪಕವೆನಿಸುವುದು (ಉದಾ-ಪ, ೧೬೬)

೫೬. ಸಮಾಧಿ:—ಯಾವುದಾದರೂ ಒಂದು ಕಾರಣದಿಂದ ಪ್ರಾರಿಪ್ಸಿತವಾದ ಕಾರ್ಯಕ್ಕೆ ಕಾರಣಾಂತರ ಸನ್ನಿಧಿಯಿಂದ ಸೌಕರ್ಯವುಂಟಾದಂತೆ ವರ್ಣಿತವಾಗಿದ್ದರೆ ಸಮಾಧ್ಯಲಂಕಾರವೆಂದು ಹೆಸರು. (ಉದಾ-ಪ. ೧೬೭)

೫೭. ಪ್ರತ್ಯನೀಕ... ಪ್ರಬಲನಾದ ಶತ್ರುವಿನಮುಂದೆ ಪರಾಕ್ರಮವನ್ನು ಮಾಡಿದಂತೆ ವರ್ಣಿತವಾಗಿದ್ದರೆ ಪ್ರತ್ಯನೀಕಾಲಂಕಾರವೆಂದು ಹೆಸರು (ಉದಾ-ಪ, ೧೬೮) (ಎಂದರೆ ಪ್ರಬಲನಾದ ಶತ್ರುವಿಗೆ ಪ್ರತೀಕಾರವು ಸಾಧ್ಯವಾಗದಿರಲು ಅವನಿಗೆ ಬಾಧೆಯಾದರೂ ಉಂಟಾಗುವಂತೆ ಮಾಡುವುದೆಂದರ್ಥವು)

೫೮. ಕಾವ್ಯಾರ್ಥಾಪತ್ತಿ—ಯಾವ ಸ್ಥಲದಲ್ಲಿ ದುಷ್ಕರವಾದ ಅರ್ಥವೇ ಸಿದ್ಧವಾಗುತ್ತಿರಲು ಇನ್ನು ಸುಕರವಾದ ಅರ್ಥವು ಸಿದ್ಧಿಸುವುದೆಂದು ಹೇಳಬೇಕಾದುಗೇನು? (ಇದಕ್ಕೆ ಕೈಮುತಿಕನ್ಯಾಯವೆಂದು ಹೆಸರು) ಎಂದು ವರ್ಣಿತವಾಗಿರುವುದೋ ಅದಕ್ಕೆ ಕಾವ್ಯಾರ್ಥಾಪ್ರತ್ತ್ಯಲಂಕಾರವೆಂದು ಹೆಸರು (ಉದಾ_ಪ. ೧೬೯)

೫೯. ಕಾವ್ಯಲಿಂಗ——ಸಮರ್ಥನವನ್ನು ಅಪೇಕ್ಷಿಸುವ ಅರ್ಥವನ್ನು ಹೇತುಬಲದಿಂದ ಸಮರ್ಥನ ಮಾಡುವುದು ಕಾವ್ಯಲಿಂಗಾಲಂಕಾರವೆನಿಸುವುದು. ಇದರಲ್ಲಿ ಈ ಭೇದಗಳಿರುವವು--

(೧)ವಾ ಕ್ಯಾರ್ಥಹೇತುಕ-ವಾಕ್ಯದ ಅರ್ಥವು ಸಮರ್ಥನವನ್ನು ಅಪೇಕ್ಷಿಸುತ್ತಿರಲು ಅದನ್ನು ಹೇತುವಿನಿಂದ ಸಮರ್ಥಿಸುವುದು (ಉದಾ-ಪ, ೧೭೦) ಹೀಗೆಯೇ (೨) ಪದಾರ್ಥಹೇತುಕ (ಉದಾ-ಪ,೧೭೧,

(೩) ವಾಕ್ಯಾರ್ಥಪದಾರ್ಥಹೇತುಕ (ಉದಾ-ಪ. ೧೭೨)

(೪) ವಾಕ್ಯಾರ್ಥವು ಸಮರ್ಥನೀಯವಾಗಿರಲು ಪದಾರ್ಥಹೇತುಕ (ಉದಾ-ಪ. ೧೭೩)

(೫) ಸಮರ್ಥಿಸಲ್ಪಡಬೇಕಾದ ಎರಡು ಅರ್ಥಗಳು ಪರಸ್ಪರ ವಿರು

ದ್ಧವಾಗಿದ್ದು ಕ್ರಮವಾಗಿ ಒಂದಕ್ಕೊಂದು ಹೇತುವಾಗಿದ್ದರೆ ಅದೂ ಒಂದು ಭೇದವು (ಉದಾ-ಪ. ೧೩೪)

(೬) ಸಮರ್ಥಿಸಲ್ಪಡಬೇಕಾದ ಎರಡು ಅರ್ಥಗಳು ಪರಸ್ಪರ ವಿರುದ್ಧವಾಗಿದ್ದರೂ ಒಂದೇ ಹೇತುವಾಗುವುದೂ ಒಂದು ಭೇದವು (ಉದಾ-ಪ. ೧೩೫)

(೭) ಪದ್ಯ ೧೩೬-ಇಂತಹ ಸ್ಥಳದಲ್ಲಿ ಹೇತ್ವಲಂಕಾರವೆಂದು ಜಯದೇವನ ಮತ; ಕಾವ್ಯಲಿಂಗವೇ ಎಂದು ಕುವಲಯಾನಂದಕಾರನ ಮತ.

೬೦. ಅರ್ಥಾಂತರನ್ಯಾಸ—ಎಲ್ಲಿ ಸಾಮಾನ್ಯವಾಗಲೀ ವಿಶೇಷವಾಗಲೀ ಆಗಿರುವ ಪ್ರಸ್ತುತವಿಷಯವು ಅಪ್ರಸ್ತುತವಾದ ಬೇರೊಂದು ವಿಶೇಷವೋ ಸಾಮಾನ್ಯವೋ ಆದ ಅರ್ಥದೊಡನೆ ಉಕ್ತವಾಗಿರುವುದೋ ಅದಕ್ಕೆ ಅರ್ಥಾಂತರನ್ಯಾಸಾಲಂಕಾರವೆಂದು ಹೆಸರು.

(೧) ವಿಶೇಷವು ಪ್ರಸ್ತುತವಾಗಿರಲು ಅಪ್ರಸ್ತುತವಾದ ಸಾಮಾನ್ಯಾರ್ಥವನ್ನು ಅದರೊಡನೆ ಇಡುವುದು (ನ್ಯಾಸ) (ಉದಾ-ಪ. ೧೩೭)

(೨) ಸಾಮಾನ್ಯವು ಪ್ರಸ್ತುತವಾಗಿರಲು ಅಪ್ರಸ್ತುತವಾದ ವಿಶೇಷದ ನ್ಯಾಸ (ಉದಾ-ಪ. ೧೩೮)

(೩) ಅಪ್ರಕೃತಾರ್ಥದಿಂದ ಪ್ರಕೃತಾರ್ಥವನ್ನು ಸಮರ್ಥನ ಮಾಡುವುದೂ ಒಂದು ಭೇದವು (ಉದಾ-ಪ. ೧೩೯)

(೪) ಪ್ರಕೃತಾರ್ಥದಿಂದ ಅಪ್ರಕೃತಾರ್ಥವನ್ನು ಸಮರ್ಥನಮಾಡುವುದು (ಉದಾ-ಪ.೧೪೦)

೬೧. ವಿಕಸ್ವರ—ಎಲ್ಲಿ ಒಂದು ವಿಶೇಷಾರ್ಥವನ್ನು ಸಮರ್ಥನಮಾಡಲು ಒಂದು ಸಾಮಾನ್ಯಾರ್ಥವನ್ನು ಸೇರಿಸಿದರೂ ಅದು ಪ್ರಸಿದ್ಧವಾಗಿದರೂ ತೃಪ್ತನಾಗದೆ ಕವಿ, ಅದನ್ನು ಸಮರ್ಥಿಸುವುದಕ್ಕೆ ಉಪಮಾನರೀತಿಯಿಂದಲೋ ಅರ್ಥಾಂತರನ್ಯಾಸ ವಿಧಿಯಿಂದಲೋ ಮತ್ತೊಂದು ವಿಶೇಷಾಂತರವನ್ನು ಸೇರಿಸುವನೋ ಅದಕ್ಕೆ ವಿಕಸ್ವರಾಲಂಕಾರವೆಂದು ಹೆಸರು (ಉದಾ-ಪ. ೧೪೧)

ಉಪಮಾನರೀತಿಯಿಂದ ವಿಶೇಷಾಂತರನ್ಯಾಸ (ಉದಾ-ಪ. ೧೪೨)

ಅರ್ಥಾಂತರನ್ಯಾಸವಿಧಿಯಿಂದ (ಉದಾ-ಪ ೧೪೩)

ಮತ್ತೊಂದು ಭೇದ! (ಉದಾ-ಪ. ೧೮೪)

೬೨. ಪ್ರೌಢೋಕ್ತಿ—ಕಾರ್ಯಾತಿಶಯಕ್ಕೆ ಹೇತುವಾಗದ ವಸ್ತುವಿನಲ್ಲಿ ತದ್ಧೇತುತ್ವ ಕಲ್ಪನೆಯಿದ್ದರೆ ಪ್ರೌಢೋಕ್ತಿಯೆನಿಸುವುದು (ಉದಾ-ಪ. ೧೮೫)

೬೩. ಸಂಭಾವನೆ—ಎಲ್ಲಿ ಒಂದು ತರ್ಕಣವು ಮತ್ತೊಂದು ತರ್ಕಣಕ್ಕೆ ಸಾಧನವಾಗುವುದೋ ಅದು ಸಂಭಾವನಾಲಂಕಾರವೆನಿಸುವುದು (ಉದಾ-ಪ. ೧೮೬)

೬೪. ಮಿಥ್ಯಾಧ್ಯವಸಿತಿ—ಎಲ್ಲಿ ಒಂದನ್ನು ಶುದ್ಧಾಂಗವಾಗಿಲ್ಲವೆಂದು ಸಾಧಿಸುವುದಕ್ಕಾಗಿ ಅತ್ಯಂತಾಸಂಭವನೀಯವಾದ ಅರ್ಥವು ಕಲ್ಪಿತವಾಗಿರುವುದೋ ಅದಕ್ಕೆ ಮಿಥ್ಯಾಧ್ಯವಸಿತ್ಯಾಲಂಕಾರವೆಂದು ಹೆಸರು.

(೧) ಇದು ನಿದರ್ಶನಗರ್ಭವಾಗಿದ್ದರೂ ಇರಬಹುದು (ಉದಾ-ಪ. ೧೮೭) (೨) ಶುದ್ಧವಾಗಿದ್ದರೂ ಇರಬಹುದು (ಉದಾ-ಪ. ೧೮೮)

೬೫. ಲಲಿತ—ಒಂದು ಅರ್ಥವು ಪ್ರಸ್ತುತವಾಗಿರಲು ಅದಕ್ಕೆ ಸರೂಪವಾದ ಪ್ರಸ್ತುತವೃತ್ತಾಂತವನ್ನೇ ವರ್ಣಿಸುವುದು ಲಲಿತಾಲಂಕಾರವೆನಿಸುವುದು (ಉದಾ-ಪ. ೧೮೯) ಇದು ೧೯೦-೧೯೧ನೆಯ ಪದ್ಯಗಳಲ್ಲಿರುವ ರೂಪದಲ್ಲಿಯೂ ಬರಬಹುದು. ಲಲಿತಾಲಂಕಾರವನ್ನು ಇತರಾಲಂಕಾರವೆಂದು ಭ್ರಾಂತಿಬಾರದಂತೆ ನೋಡಿಕೊಳ್ಳಬೇಕು.

೬೬. ಪ್ರಹರ್ಷಣ—(೧) ಒಂದು ಅರ್ಥವು ಉತ್ಕಂಠಿತವಾಗಲು ಯತ್ನವಿಲ್ಲದೆ ಅದರ ಲಾಭವುಂಟಾಗಲು ಪ್ರಹರ್ಷಣಾಲಂಕಾರವೆನಿಸುವುದು. (ಉದಾ-ಪ. ೧೯೨) (೨) ಅಭಿಲಷಿತವಾದುದಕ್ಕೆ ಅಧಿಕವಾದ ಅರ್ಥ ಸಂಸಿದ್ಧಿಯಿದ್ದರೆ ಅದೂ ಪ್ರಹರ್ಷಣವು (ಉದಾ-ಪ. ೧೯೩)

(೩) ಫಲೋಪಾಯಸಿದ್ಧಿಗಾಗಿ ಯತ್ನಿಸುತ್ತಿರಲು ಉಪಾಯಸಿದ್ಧಿಯ ಅಪೇಕ್ಷೆಯೇ ಇಲ್ಲದೆ ಸಾಕ್ಷಾತ್ಫಲವೇ ಲಾಭವಾದರೆ ಅದೂ ಪ್ರಹರ್ಷಣವು. (ಉದಾ ೧೯೪)

೬೭. ವಿಷಾದನ—ಇಷ್ಟಾರ್ಥಪ್ರಾಪ್ತಿಗೆ ಅನುಕೂಲವಾದ ಯತ್ನವನ್ನು ಮಾಡಹೊರಡಲು ಅದಕ್ಕೆ ವಿರುದ್ಧವಾದಅರ್ಥಪ್ರಾಪ್ತಿಯಾದರೆ ವಿಷಾದನಾಲಂಕಾರವೆನಿಸುವುದು (ಉದಾ-ಪ. ೧೯೫)

೬೮. ಉಲ್ಲಾಸ—ಎಲ್ಲಿ (೧) ಒಂದರ ಗುಣದಿಂದ ಮತ್ತೊಂದರ ಗುಣವಾಗಲೀ (೨) ದೋಷದಿಂದ ದೋಷವಾಗಲೀ (೩) ಗುಣದಿಂದ ದೊ

ಷವಾಗಲೀ(೪)ದೋಷದಿಂದ ಗುಣವಾಗಲೀ ವರ್ಣಿತವಾಗಿರುವುದೋ ಅದಕ್ಕೆ ಉಲ್ಲಾಸಾಲಂಕಾರವೆಂದು ಹೆಸರು. ಪದ್ಯಗಳು ೧೯೬, ೧೯೭, ೧೯೮, ೧೯೯ ಈ ನಾಲ್ಕು ಭೇದಗಳಿಗೂ ಕ್ರಮವಾಗಿ ಉದಾಹರಣೆಗಳು.

೬೯. ಅವಜ್ಞೆ—(೧) ಒಂದರಗುಣದಿಂದ ಇನ್ನೊಂದಕ್ಕೆ ಗುಣವೂ (೨) ಒಂದರ ದೋಷದಿಂದ ಇನ್ನೊಂದಕ್ಕೆ ದೋಷವೂ ಆಗದಂತೆ ವರ್ಣಿತವಾಗಿದ್ದರೆ ಅವಜ್ಞಾಲಂಕಾರವೆನಿಸುವುದು. ಪದ್ಯ ೨೦೦-೨೦೧ ಇವೆರಡು ಭೇದಗಳಿಗೂ ಉದಾಹರಣೆಗಳು.

೭೦. ಅನುಜ್ಞೆ—ದೋಷವು ಅನಿಷ್ಟಕ್ಕೆ ಸಾಧನಭೂತವಾಗಿ ಕಾಣಬಂದರೂ ಅದು ಬಲವತ್ತರವಾದ ಇಷ್ಟಸಾಧನಕ್ಕೆ ಕಾರಣವಾಗುವುದರಿಂದ ಅದೇ ನಮಗಿರಲೆಂದು ಅಂಗೀಕರಿಸುವುದು ಅನುಜ್ಞಾಲಂಕಾರವಾಗುವುದು (ಉದಾ-ಪ. ೨೦೨)

೭೧ ಲೇಶ—ದೋಷವು ಗುಣದಂತೆಯೂ ಗುಣವು ದೋಷದಂತೆಯೂ ಕಲ್ಪಿತವಾಗಿದ್ದರೆ ಲೇಶಾಲಂಕಾರವಾಗುವುದು (ಉದಾ-ಪ. ೨೦೩)

೭೨. ಮುದ್ರೆ—ವಿವಕ್ಷಿತಾರ್ಥವನ್ನು ಪ್ರತಿಪಾದನ ಮಾಡತಕ್ಕ ಪದಗಳಿಂದ ಸೂಚನೀಯಾರ್ಥವನ್ನು ಸೂಚಿಸುವುದು ಮುದ್ರಾಲಂಕಾರವೆನಿಸುವುದು (ಉದಾ-ಪ. ೨೦೪)

(ಇಲ್ಲಿ ವಿಷಮಜವಾಗದು ಎಂದರೆ ವಿಷಮಸ್ಥಾನದಲ್ಲಿ ಜಗಣವು ಬರಕೂಡದು, ಕಂದ, ಮಾತ್ರಾವೃತ್ತ, ಇವುಗಳಿಂದ ಈ ಪದ್ಯವು ವಿರಚಿತವಾಗಿರುವ ಕಂದ ವೃತ್ತದ ಲಕ್ಷಣವು ಕೊಂಚ ಗೊತ್ತಾಗುವುದು)

೭೩. ರತ್ನಾವಳಿ—ಪ್ರಕೃತಾರ್ಥಗಳನ್ನು ಕ್ರಮವಾಗಿ ವಿನ್ಯಾಸಮಾಡಿದ್ದರೆ ರತ್ನಾವಳ್ಯಲಂಕಾರವೆನಿಸುವುದು. ಈ ವಿನ್ಯಾಸದಲ್ಲಿ—

(೧) ಪ್ರಸಿದ್ಧಕ್ರಮವನ್ನಾದರೂ ಅನುಸರಿಸಬಹುದು (ಉದಾ-ಪ. ೨೦೫)

(೨) ಪ್ರಸಿದ್ಧಕ್ರಮವನ್ನು ಅನುಸರಿಸದೆ ಇದ್ದರೂ ಇರಬಹುದು (ಉದಾ-ಪ. ೨೦೬)

೭೪. ತದ್ಗುಣ—ಸ್ವಗುಣಪರಿತ್ಯಾಗಮಾಡಿ ಅನ್ಯದೀಯಗುಣಸ್ವೀ

ಕಾರಮಾಡುವಂತೆ ವರ್ಣಿತವಾಗಿದರೆ ತದ್ಗುಣಾಲಂಕಾರವೆನಿಸುವುದು (ಉದಾ-ಪ. ೨೦೭)

೭೫. ಪೂರ್ವರೂಪ--(೧)ಮೊದಲು ಸ್ವಗುಣಪರಿತ್ಯಾಗದಿಂದ ಅನ್ಯ ಗುಣಸ್ವೀಕಾರಮಾಡಿದ್ದರೂ ಮತ್ತೆ ನಿಜಗುಣಪ್ರಾಪ್ತಿಯೇ ಇರುವಂತೆ ವರ್ಣಿತವಾಗಿದ್ದರೆ ಪೂರ್ವರೂಪಾಲಂಕಾರವೆನಿಸುವುದು (ಉದಾ-ಪ. ೨೦೮)

(೨) ವಸ್ತುವಿಕಾರವನ್ನು ಹೊಂದಿದರೂ ಪೂರ್ವಾವಸ್ಥೆಯ ಅನುವೃತ್ತಿಯಿದ್ದರೆ ಅದೂ ಪೂರ್ವರೂಪವೆನಿಸುವುದು (ಉದಾ-ಪ. ೨೦೯)

೭೬ ಅತದ್ಗುಣ—ಗುಣವದ್ವಸ್ತುಸಾನ್ನಿಧ್ಯವಿದ್ದರೂ ಅದರ ಗುಣವು ಅಂಗೀಕೃತವಾಗದಿದ್ದರೆ ಅತದ್ಗುಣಾಲಂಕಾರವೆನಿಸುವುದು. (ಉದಾ-ಪ, ೨೧೦)

೭೭ ಅನುಗುಣ—ಸಜಾತೀಯಗುಣವುಳ್ಳ ಅನ್ಯವಸ್ತುವಿನ ಸಾನ್ನಿಧ್ಯದಿಂದ ಪ್ರಾಕ್ಸಿದ್ಧ (ಪೂರ್ವದಲ್ಲಿ ವಿದ್ಯಮಾನ) ವಾದತನ್ನ ಗುಣವು (ಎಂದರೆ, ಒಂದು ವಸ್ತುವಿನಗುಣವು) ಉತ್ಕೃಷ್ಟವಾದಂತೆ ವರ್ಣಿತವಾಗಿದ್ದರೆ ಅನುಗುಣಾಲಂಕಾರವೆನಿಸುವುದು (ಉದಾ-ಪ. ೨೧೧)

೭೮. ಮೀಲಿತ—ಎರಡುವಸ್ತುಗಳು ಸದೃಶವಾಗಿರುವುದರಿಂದ ಭೇದವು ಅಭಿವ್ಯಕ್ತವಾಗದೇ ಇದ್ದರೆ ಮೀಲಿತಾಲಂಕಾರವೆನಿಸುವುದು. (ಉದಾ-ಪ. ೨೧೨)

೭೯, ಸಾಮಾನ್ಯ—ಅನೇಕ ವಸ್ತುಗಳಿಗೆ ಸಾಮ್ಯವಿದ್ದು ವ್ಯಾವರ್ತಕ ಧರ್ಮವು ಕಾಣಬರದಿದ್ದರೆ ಸಾಮಾನ್ಯಾಲಂಕಾರವೆನಿಸುವುದು (ಉದಾ-ಪ. ೨೧೩)

೮೦. ಉನ್ಮೀಲಿತ—ಅತುಲ್ಯಗುಣಶಾಲಿಗಳಾದ ಎರಡು ವಸ್ತುಗಳಿಗೆ ಇರುವ ಭೇದವು ಸ್ಫೂರ್ತಿಯಾದರೆ ಉನ್ಮೀಲಿತವಾಗುವುದು (ಉದಾ-ಪ. ೨೧೪) ಇದು ಮೀಲಿತಾಲಂಕಾರಕ್ಕೆ ಪ್ರತಿದ್ವಂದ್ವಿ.

೮೧. ವಿಶೇಷಕ— ಸದೃಶವಾದ ಎರಡು ವಸ್ತುಗಳ ವೈಧರ್ಮ್ಯವು ಸ್ಫೂರ್ತಿಯಾದರೆ ವಿಶೇಷಕಾಲಂಕಾರವೆನಿಸುವುದು (ಉದಾ-ಪ. ೨೧೫) [ಇದು ಸಾಮಾನ್ಯಾಲಂಕಾರಕ್ಕೆ ಪ್ರತಿದ್ವಂದ್ವಿ.]

೮೨. ಗೂಢೋತ್ತರ – ಸ್ವಲ್ಪ ಗೂಢಾಭಿಪ್ರಾಯಗರ್ಭವಾದ ಉತ್ತರ

ವಿದ್ದರೆ ಗೂಢೋತ್ತರಾಲಂಕಾರವೆನಿಸುವುದು ೧ ಪ್ರಶ್ನೆ ಉನ್ನೇಯವಾದ ರೂ ಆಗಬಹುದು (ಉದಾ-ಪ. ೨೧೬)

೨ ನಿಬದ್ಧಪ್ರಶ್ನೆಗೆ ಉತ್ತರವಿದ್ದರೂ ಇರಬಹುದು (ಉದಾ--) ಪ. ೨೧೭)

೮೩. ಚಿತ್ರೋತ್ತರ—ಪ್ರಶ್ನೆಯೂ ಉತ್ತರವೂ ಒಂದೇ ಆಗಿದ್ದರೂ ಚಿತ್ರೋತ್ತರಾಲಂಕಾರವೆನಿಸುವುದು (ಉದಾ-ಪ. ೨೧೮) (ಈ ಪದ್ಯದಲ್ಲಿ ಪ್ರಶ್ನೆಯೂ ಉತ್ತರವೂ ಒಂದೇ ಆಗಿರುವ ಎರಡು ಉದಾಹರಣೆಗಳೂ ಎರಡು ಪ್ರಶ್ನೆಗಳಿಗೆ ಒಂದು ಉತ್ತರವಾಗಿರುವ ಒಂದು ಉದಾಹರಣೆಯೂ ಇರುವುದು)

೮೪. ಸೂಕ್ಷ್ಮ—ತನ್ನ ಆಶಯವನ್ನು ಇಂಗಿತಾದಿಗಳಿಂದ ಮತ್ತೊಬ್ಬನು ತಿಳಿಯಲು ಅವನ ಇದಿರಿನಲ್ಲಿ ಮಾಡುವ ಸಾಕೂತ (ಎಂದರೆ ತನ್ನ ಅಭಿಪ್ರಾಯಗರ್ಭಿತವಾದ ಚೇಷ್ಟಿತವು ಸೂಕ್ಷ್ಮಾಲಂಕಾರವೆನಿಸುವುದು (ಉದಾ-ಪ. ೨೧೯)

೮೫. ಪಿಹಿತ—ಪರಕೀಯ ವ್ಯಾಪಾರವನ್ನರಿತು ಸಾಕೂತ (ಎಂದರೆ ಸ್ವಾಭಿಪ್ರಾಯಗರ್ಭಿತವಾದ ಚೇಷ್ಟಿತವು ಪಿಹಿತಾಲಂಕಾರವೆನಿಸುವುದು (ಉದಾ-ಪ. ೨೨೦)

೮೬. ವ್ಯಾಜೋಕ್ತಿ—ನಿಗೂಢವಾದ ವಸ್ತು ಪ್ರಕಟವಾಗಲು ಹೇತ್ವಂತರವನ್ನು ಕಲ್ಪಿಸಿ ಅದನ್ನು ಗೋಪನಮಾಡುವುದು ವ್ಯಾಜೋಕ್ತಿಯೆನಿಸುವುದು (ಉದಾ-ಪ. ೨೨೧)

೮೭. ಗೂಢೋಕ್ತಿ—ಒಬ್ಬನನ್ನು ಉದ್ದೇಶಿಸಿ ಹೇಳಬೇಕಾದ ಅರ್ಥವನ್ನು ಮತ್ತೊಬ್ಬನನ್ನು ಉದ್ದೇಶಿಸಿ ಶ್ಲೇಷಪೂರ್ವಕವಾಗಿ ಹೇಳಿದ್ದರೆ ಗೂಢೋಕ್ತಿಯೆನಿಸುವುದು (ಉದಾ-ಪ. ೨೨೨)

೮೮. ವಿವೃತೋಕ್ತಿ—ಶ್ಲೇಷದಿಂದ ಗುಪ್ತವಾದ ಅರ್ಥವನ್ನು ಕವಿ ತನ್ನ ಮಾತಿನಿಂದ ಸ್ಫುಟವಾಗುವಂತೆ ಮಾಡಿದ್ದರೆ ವಿವೃತೋಕ್ತಿಯೆಂದು ಹೆಸರು. ಇದರಲ್ಲಿ ಈ ಭೇದಗಳಿರುವುವು.

(೧) ಪರವಂಚನೆಗಾಗಿ ಗುಪ್ತಾವಿಷ್ಕರಣ (ಉದಾ-ಪ. ೨೨೩)

(೨) ತ್ರಪಾಗುಪ್ತಾವಿಷ್ಕರಣ (ಉದಾ-ಪ. ೨೨೪)

(೩) ಅರ್ಥಶಕ್ತಿಮೂಲಗುಪ್ತಾರ್ಥಾವಿಷ್ಕರಣ (ಉದಾ-ಪ. ೨೨೫)

(೪) ಕವಿಗುಪ್ತಾವಿಷ್ಕರಣ (ಉದಾ-ಪ. ೨೨೬)

೪೯. ಯುಕ್ತಿ—ಸ್ವಾಭಿಪ್ರಾಯರೂಪ ಮರ್ಮವನ್ನು ನಿಗೂಹನ ಮಾಡಲು ಯಾವುದಾದರೂ ಒಂದು ವ್ಯಾಪಾರದಿಂದ ಪರವಂಚನೆಯನ್ನು ಮಾಡಲು ಯುಕ್ತ್ಯಲಂಕಾರವೆನಿಸುವುದು (ಉದಾ-ಪ. ೨೨೭)

೫೦ ಲೋಕೋಕ್ತಿ—ಲೋಕಪ್ರವಾದವನ್ನು ಅನುಕರಿಸಿ ಉಲ್ಲೇಖಿಸುವುದು ಲೋಕೋಕ್ತ್ಯಲಂಕಾರವೆನಿಸುವುದು (ಉದಾ-ಪ. ೨೨೮)

೫೧ ಛೇಕೋಕ್ತಿ—ಲೋಕಪ್ರವಾದದ ಅನುವಾದವು ಒಂದು ವಸ್ತುವಿನ ವಿಷಯವಾಗಿಯೋ ಜನೀಯವಾಗಿರಲು ಮತ್ತೊಬ್ಬನಿಗೆ ತಿಳಿದ ಅರ್ಥಾಂತರ ವಿಷಯಕವಾದರೆ ಛೇಕೋಕ್ತಿಯೆನಿಸುವುದು (ಉದಾ-ಪ೨೨೯)

೫೨ ವಕ್ರೋಕ್ತಿ—ಒಬ್ಬನು ಒಂದು ಅಭಿಪ್ರಾಯವುಳ್ಳ ಮಾತನ್ನು ಹೇಳಿದರೆ ಅದಕ್ಕೆ ಬೇರೊಂದರ್ಥವನ್ನು ಕಲ್ಪಿಸುವುದು ವಕ್ರೋಕ್ತ್ಯಲಂಕಾರವೆನಿಸುವುದು ಇದರಲ್ಲಿ ಈ ಭೇದಗಳಿರುವುವು.

(೧) ಅವಿಕೃತಶಬ್ದಶ್ಲೇಷಮೂಲ (ಉದಾ-ಪ, ೨೩೦)

(೨) ವಿಕೃತಶಬ್ದಶ್ಲೇಷಮೂಲ (ಉದಾ-ಪ. ೨೩೧)

(೩) ಅರ್ಥಶ್ಲೇಷಮೂಲ (ಉದಾ-ಪ. ೨೩೨)

(೪) ಕಾಕುಮೂಲ (ಉದಾ-ಪ. ೨೩೩)

೫೩. ಸ್ವಭಾವೋಕ್ತಿ—ತಜ್ಜಾತ್ಯುಚಿತವಾದ ಸ್ವಭಾವ ವರ್ಣನವು ಸ್ವಭಾವೋಕ್ತಿಯೆನಿಸುವುದು (ಉದಾ-ಪ. ೨೩೪)

೫೪. ಭಾವಿಕ—ಕಳೆದುದಾಗಲೀ ಮುಂದೆ ಬರುವುದಾಗಲೀ ಆಗಿರುವ ಅರ್ಥವನ್ನು ಸಾಕ್ಷಾತ್ಕಾರವಾದಂತೆ ವರ್ಣನೆ ಮಾಡಿದ್ದರೆ ಭಾವಿಕಾಲಂಕಾರವೆನಿಸುವುದು (ಉದಾ-ಪ. ೨೩೫)

೫೫. ಉದಾತ್ತ—ಸಂಪತ್ಸಮೃದ್ಧಿಯುಳ್ಳುದಾಗಲೀ ಮಹಾಪುರುಷ ಸಂಬಂಧದಿಂದ ಶ್ಲಾಘ್ಯವಾದುದಾಗಲೀ ಇರುವ ಒಂದು ವಸ್ತುವನ್ನು ಸ್ಮಾರಕರೂಪವಾಗಿ ವರ್ಣಿಸಿದ್ದರೆ ಉದಾತ್ತಾಲಂಕಾರವೆನಿಸುವುದು.

(೧) ಶ್ಲಾಘ್ಯಚರಿತಾಂಗ (ಉದಾ-ಪ. ೨೩೬)

(೨) ಋದ್ಧಿಮೂಲ (ಉದಾಂಪ. ೨೩೭)

೯೬. ಅತ್ಯುಕ್ತಿ - ಅದ್ಭುತವಾಗಿಯೂ ಅತಥ್ಯವಾಗಿಯೂ ಅಸಂಭಾವಿತವಾಗಿಯೂ ಇರುವ ಶೌರ್ಯೌದಾರ್ಯಾದಿಗಳನ್ನು ವರ್ಣಿಸುವುದು ಅತ್ಯುಕ್ತ್ಯಲಂಕಾರವು (ಉದಾ-ಪ. ೨೩೮)

೯೭. ನಿರುಕ್ತಿ ...ಯೋಗವಿರಲು ಹೆಸರುಗಳಿಗೆ ಅನ್ವರ್ಥತ್ವವನ್ನು ಕಲ್ಪಿಸುವುದು ನಿರುಕ್ತ್ಯಲಂಕಾರವೆನಿಸುವುದು (ಉದಾ-ಪ. ೨೩೯)

೯೮ ಪ್ರತಿಷೇಧ – ಪ್ರಸಿದ್ಧನಿಷೇಧದ ಅನುವಾದವಾಗಿದ್ದರೂ ಜಾತವಾಗಿರುವುದರಿಂದ ಅದಕ್ಕೆ ಸ್ವತಸ್ಸಿದ್ಧವಾದ ಉಪಯೋಗವಿಲ್ಲದಿದ್ದರೂ ಅರ್ಥಾಂತರಗರ್ಭೀಕಾರದಿಂದ ಚಾರುತ್ವವನ್ನುಂಟುಮಾಡಿದ್ದರೆ ಪ್ರತಿಷೇಧಾಲಂಕಾರವೆನಿಸುವುದು (ಉದಾ-ಪ. ೨೪೦)

೯೯. ವಿಧಿ—ಜ್ಞಾನಾರ್ಥವನ್ನೇ ಹೇಳಿ ಅದರಿಂದ. ಸ್ವತಸ್ಸಿದ್ಧವಾದ ಪ್ರಯೋಜನವೇನೂ ಇಲ್ಲದಿದ್ದರೂ ಅಭಿಪ್ರಾಯಾಂತರವು ಗರ್ಭೀಕೃತವಾಗಿರುವಂತೆ ಇದ್ದರೆ ವಿಧ್ಯಲಂಕಾರವೆನಿಸುವುದು (ಉದಾ-ಪ. ೨೪೧)

೧೦೦ ಹೇತು—ಕಾರ್ಯಕಾರಣಗಳ ಸಹವರ್ಣನೆಯಿದ್ದರೆ ಹೇತ್ವಲಂಕಾರವೆನಿಸುವುದು. (ಉದಾ-ಪ ೨೪೨)

(೨) ಕಾರ್ಯಕಾರಣಗಳ ಅಭೇದ ವರ್ಣನೆಯನ್ನು ಕೆಲವರು ಹೇತ್ವಲಂಕಾರವೆನ್ನುವರು (ಉದಾ-ಪ. ೨೪೩)

## ರಸಾಲಂಕಾರಗಳು

(೧) ವಿಭಾವಾನುಭಾವ ಸಾತ್ವಿಕ ವ್ಯಭಿಚಾರಗಳಿಂದ ಅಭಿವ್ಯಂಜಿತವಾದ ರತಿಹಾಸ ಶೋಕಾದಿ ಚಿತ್ತವೃತ್ತಿವಿಶೇಷಕ್ಕೆ ರಸವೆಂದು ಹೆಸರು. ಆ ರಸವು ಎಲ್ಲಿ ಇನ್ನೊಂದಕ್ಕೆ ಅಂಗವಾಗುವುದೋ ಅದು ರಸಾಲಂಕಾರವೆನಿಸುವುದು.

(೨) ವಿಭಾವಾನುಭಾವಗಳಿಂದ ಅಭಿವ್ಯಂಜಿತವಾಗುವುದಾಗಿಯೂ ನಿರ್ವೇದಾದಿ ಮೂವತ್ತು ಮೂರು ಭೇದಗಳುಳ್ಳುದಾಗಿಯೂ ದೇವರು, ಗುರು, ಶಿಷ್ಯ, ದ್ವಿಜ, ಪುತ್ರ, ಇತ್ಯಾದಿಗಳಲ್ಲಿ ಅಭಿವ್ಯಂಜ್ಯಮಾನವಾಗುವ ರತಿಯಾಗಿಯೂ ಇರುವುದು ಭಾವವು (೩) ರಸವು ಅನೌಚಿತ್ಯದಿಂದ ಪ್ರವೃತ್ತವಾಗಿದ್ದರೆ ರಸಾಭಾಸವೆನಿಸುವುದು. ಭಾವವು ಅನೌಚಿತ್ಯದಿಂದ ಪ್ರವೃತ್ತವಾಗಿದ್ದರೆ ಭಾವಾಭಾಸವೆನಿಸುವುದು. ರಸಾಭಾಸ, ಭಾವಾಭಾಸ

ಗಳು, ಇನ್ನೊಂದಕ್ಕೆ ಅಂಗವಾಗಿದ್ದರೆ ಊರ್ಜಸ್ವಿಎಂಬ ಅಲಂಕಾರವಾಗುವುದು. (೪) ಭಾವದ ಪ್ರಶಾಮ್ಯದವಸ್ಥೆಗೆ ಭಾವಶಾಂತಿಯೆಂದು ಹೆಸರು.ಅದು ಇನ್ನೊಂದಕ್ಕೆ ಅಂಗವಾಗಿದ್ದರೆ ಸಮಾಹಿತಾಲಂಕಾರವೆನಿಸುವುದು. (೫+೬+೭) ಭಾವದ ಉದ್ಗಮಾವಸ್ಥೆಗೆ ಭಾವೋದಯವೆಂದು ಹೆಸರು. ಎರಡು ವಿರುದ್ಧಭಾವಗಳಿಗೆ ಪರಸ್ಪರ ಸ್ಪರ್ಧೆಯಿಲ್ಲದಿದ್ದರೆ ಭಾವಸಂಧಿಯೆಂದು ಹೆಸರು. ಬಹು ಭಾವಗಳು ಪೂರ್ವಪೂರ್ವೋಪಮರ್ದನದಿಂದ ಹುಟ್ಟಿದರೆ ಭಾವಶಬಲತ್ವವೆಂದು ಹೆಸರು. ಭಾವೋದಯಾದಿಗಳು ಇತರ ಭಾವಗಳಿಗೆ ಅಂಗವಾಗಲು ಭಾವೋದಯಾದಿ ಮೂರು ಅಲಂಕಾರಗಳಾಗುವುವು. (ರಸ ಲಕ್ಷಣಾದಿಗಳು ಸಮಗ್ರವಾಗಿ ತಿಳಿದಲ್ಲದೆ ಈ ವಿಷಯವು ಕೇವಲ ಗಹನವಾಗುವುವು)

(೧) ರಸವತ್-ಪ. ೨೪೫ ಇಲ್ಲಿ ಮುನಿವಿಷಯಕವಾದ ಭಾವಕ್ಕೆ ಅದ್ಭುತರಸವು ಅಂಗವಾಗಿರುವುದು; ಪ. ೨೪೬ ಇಲ್ಲಿ ಕರುಣಾರಸಕ್ಕೆ ಶೃಂಗಾರರವು ಅಂಗವಾಗಿರುವುದು.

(೨) ಪ್ರೇಯಸ್-ಪ್ರೇಯೋಲಂಕಾರಕ್ಕೆ ಭಾವಾಲಂಕಾರವೆಂದೂ ಹೆಸರು. ಪ. ೨೪೭ ಇಲ್ಲಿ ಶಾಂತಿರಸಕ್ಕೆ ಚಿಂತೆಯೆಂಬ ವ್ಯಭಿಚಾರಿ ಭಾವವು ಅಂಗವಾಗಿರುವುದು. ಪದ್ಯ ೨೪೮. ಇಲ್ಲಿ ನರಹರಿ ವಿಷಯ ರತಿಭಾವಕ್ಕೆ ಬ್ರಹ್ಮಾಂಡ ವಿಷಯ ರತಿಭಾವವು ಅಂಗವಾಗಿರುವುದು.

(೩) ಊರ್ಜಸ್ವಿ—ಪದ್ಯ ೨೪೯. ಇಲ್ಲಿ ನರಹರಿ ರತಿಭಾವಕ್ಕೆ ಶೃಂಗಾರ ರಸಾಭಾಸವು ಅಂಗವಾಗಿರುವುದು. (ಶೃಂಗಾರವು ಪರದಾರ ವಿಷಯವಾಗುವುದು ಒಂದು ವಿಧದ ಶೃಂಗಾರಾಭಾಸವು)

ಪದ್ಯ. ೨೫೦ ಇಲ್ಲಿ ನರಹರಿ ವಿಷಯ ರತಿಭಾವಕ್ಕೆ ತದ್ವಿಯದ್ವಿಪದ್ಗಣ ರತಿರೂಪವಾದ ಭಾವಾಭಾಸವು ಅಂಗವಾಗಿರುವುದು.

(೪) ಸಮಾಹಿತ—ಪದ್ಯ-೨೫೧ ಇಲ್ಲಿ ಶೃಂಗಾರಕ್ಕೆ ಕೋಪಶಾಂತಿ ಅಂಗವಾಗಿರುವುದು.

(೫) ಭಾವೋದಯ—ಪದ್ಯ ೨೫೨. ಇಲ್ಲಿ ಶಮೋದಯವಿರುವುದು.

(೬) ಭಾವಸಂಧಿ—ಪದ್ಯ ೨೫೨. ಇಲ್ಲಿ ಆಸಂದೌತ್ಸುಕ್ಯಗಳ ಸಂಧಿ

(೭) ಭಾವಶಬಲ—ಪದ್ಯ ೨೫೪. ಇಲ್ಲಿ ವಿತರ್ಕ, ಔತ್ಸುಕ್ಯ; ಮತಿ, ಸ್ಮರಣ, ಧೈರ್ಯ, ಇವುಗಳ ಶಬಲತ್ವವಿರುವುದು.

## ಪ್ರಮಾಣಾಲಂಕಾರಗಳು

(೮) ಪ್ರತ್ಯಕ್ಷ—ಪದ್ಯ-೨೫೫. ಇಲ್ಲಿ ಪ್ರತ್ಯಕ್ಷ ಮಾತ್ರವಿರುವುದು.

ಪದ್ಯ-೨೫೬ ಇಲ್ಲಿ ವಿಶೇಷದರ್ಶನ ಜನ್ಯವಾದ ಸಂಶಯೋತ್ತರ ಪ್ರತ್ಯಕ್ಷವಿರುವುದು.

(೯) ಅನುಮಾನ (ಊಹೆ)—ಪದ್ಯ-೨೫೭ ಅಲಂಕಾರ (ಇಲ್ಲಿ ಉತ್ಪ್ರೇಕ್ಷೆ) ಗರ್ಭಿತವಾದ ಅನುಮಾನ.

ಪದ್ಯ-೨೫೮ ಇಲ್ಲಿ ಶುದ್ಧಾನುಮಾನವಿರುವುದು.

(೧೦) ಉಪಮಾನ—ಪದ್ಯ-೨೫೯ ಇಲ್ಲಿ ಉಪಮಾನ ಮೂಲಭೂತವಾದ ಅತಿದೇಶವಾಕ್ಯವಿರುವುದು.

ಪದ್ಯ-೨೬೦ ಇಲ್ಲಿ ಅತಿದೇಶವಾಕ್ಯಗಳಿಂದ ಅರ್ಥಸಾದೃಶ್ಯ ಪ್ರತ್ಯಕ್ಷರೂಪವಾದ ಉಪಮಾನವು ಫಲದೊಡನೆ ತೋರಲ್ಪಟ್ಟಿರುವುದು.

(೧೧) ಶಬ್ದಪ್ರಮಾಣ—ಪದ್ಯ-೨೬೧ ಇಲ್ಲಿ ಶ್ರುತಿಪ್ರಮಾಣ ('ತಸ್ಮಾದ್ವಿರಾಳಜಾಯತ' ವೇದ)

ಪದ್ಯ-೨೬೨ ಇಲ್ಲಿ ಸ್ಮೃತಿಪ್ರಮಾಣ ('ವೃದ್ಧೌಚಮಾತಾ ಪಿತರಾ ಸಾಧ್ವೀಭಾರ್ಯಾ ಸುತಶ್ಶಿಶುಃ । ಅಪ್ಯಕಾರ್ಯಶತಂಕೃತ್ವಾ ಭರ್ತವ್ಯಾಮನುರಬ್ರವೀತ್ ॥' ಸ್ಮೃತಿ)

ಪದ್ಯ-೨೬೩ ಇಲ್ಲಿ ಶಿಷ್ಟಾಚಾರಪ್ರಮಾಣ.

ಪದ್ಯ-೨೬೪ ಇಲ್ಲಿ ಆತ್ಮತುಷ್ಟಿಪ್ರಮಾಣ.

ಪದ್ಯ-೨೬೫ ಇಲ್ಲಿ ಶ್ರುತಿ (ಶ್ರುತಿಯೆಂದರೆ ಇಲ್ಲಿ ಇತರ ವಾಕ್ಯಾಪೇಕ್ಷೆಯಿಲ್ಲದೆ ತಾನೇ ಸಂಪೂರ್ಣಾರ್ಥವನ್ನು ಕೊಡುವ ವಾಕ್ಯವೆಂದು ಅರ್ಥವು)

ಪದ್ಯ-೨೬೬ ಇಲ್ಲಿ ಲಿಂಗ (ಲಿಂಗವೆಂದರೆ ಇತರ ವಾಕ್ಯದ ಅರ್ಥವನ್ನು ನಿರ್ಣಯಿಸುವುದಕ್ಕೆ ಒಂದು ವಾಕ್ಯದಿಂದ ತೋರಬರುವ ಹೆಗ್ಗುರುತು)

ಪದ್ಯ-೨೬೭ ಇಲ್ಲಿ ಶಬ್ದಪ್ರಮಾಣವನ್ನು ಮುಂದಿಟ್ಟುಕೊಂಡು ಚಮತ್ಕಾರಕಾರಿತ್ವವಿರುವುದು.

(೧೨) ಅರ್ಥಾಪತ್ತಿ—ಪದ್ಯ-೨೬೮,

(೧೩) ಅನುಪಲಬ್ಧಿ—ಪದ್ಯ-೨೬೯.

(೧೪) ಸಂಭವ—ಪದ್ಯ-೨೭೦ ಇಲ್ಲಿ ಸಂಭವ ಪ್ರಮಾಣಸಿದ್ಧವಾದ ಅರ್ಥವು ಉಕ್ತವಾಗಿರುವುದು.

ಪದ್ಯ-೨೭೧ ಇಲ್ಲಿ ಸಂಭವೋಪಪಾದಕವಾದ ಕಾಲಾನಂತ್ಯಾದಿಗಳು ಉಕ್ತವಾಗಿರುವುವು

ಪದ್ಯ-೨೭೨ ಇಲ್ಲಿ ಸಂಭವವೂ ಕಂಠೋಕ್ತವಾಗಿರುವುದು.

(೧೫) ಐತಿಹ್ಯ—ಪದ್ಯ-೨೭೩.

## ಸಂಸೃಷ್ಟಿಸಂಕರಗಳು

ಈ ಅಲಂಕಾರಗಳು ಯಥಾ ಸಂಭವವಾಗಿ ಕೆಲವು ಸೇರುವುದರಿಂದ ಲೌಕಿಕಾಲಂಕಾರಗಳ ಮೇಳನದಂತೆಯೇ ಚಾರುತ್ವಾತಿಶಯವುಂಟಾಗುವುದರಿಂದ ನರಸಿಂಹ ನ್ಯಾಯದಿಂದ ಪೃಥಗಲಂಕಾರಗಳಾಗುವುವು. ಎಲ್ಲಿ ಮಿಳಿತವಾಗಿರುವ ಅಲಂಕಾರಭೇದಗಳು ತಿಲತಂಡುಲ ನ್ಯಾಯದಿಂದ ಸ್ಫುಟಾವಗವ್ಯವಾನಗಳಾಗಿರುವುವೋ ಸಂಸೃಷ್ಟಿ ಎಲ್ಲಿ ಸಂಸೃಷ್ಟಿ ಎಲ್ಲಿ ನೀರಕ್ಷೀರನ್ಯಾಯದಿಂದ ಅಸ್ಫುಟಗಳಾಗಿರುವುವೋ ಅಲ್ಲಿ ಸಂಕರ

(೧೬) ಸಂಸೃಷ್ಟಿ—ಪದ್ಯ-೨೭೪ ಇಲ್ಲಿ ಶಬ್ದಾಲಂಕಾರಗಳಾದ ಅನುಪ್ರಾಸಯಮಕಗಳ ಸಂಸೃಷ್ಟಿ

ಪದ್ಯ-೨೭೫ ಇಲ್ಲಿ ಎರಡು ಉತ್ಪ್ರೇಕ್ಷೆಗಳಿಗೂ ಉಪಮಾಲಂಕಾರಕ್ಕೂ ಸಂಸೃಷ್ಟಿ.

ಪದ್ಯ-೨೭೬ ಇಲ್ಲಿ ಶಬ್ದಾಲಂಕಾರಾರ್ಥಾಲಂಕಾರಗಳ ಸಂಸೃಷ್ಟಿ

(೧೭) ಅಂಗಾಂಗಿಭಾವಸಂಕರ—ಪದ್ಯ-೨೭೭.

(೧೮) ಸಮಪ್ರಾಧಾನ್ಯಸಂಕರ—ಪದ್ಯ-೨೭೮.

(೧೯) ಸಂದೇಹಸಂಕರ—ಪದ್ಯ-೨೭೯.

(೨೦) ಏಕವಾಚಕಾನುಪ್ರವೇಶಸಂಕರ—ಪದ್ಯ-೨೮೦. ಶಬ್ದಾರ್ಥಾಲಂಕಾರಗಳು ಒಂದೇ ಸ್ಥಳದಲ್ಲಿ ಕಾಣಬರುವುದು.

ಭದ್ರಂ ಭೂಯಾತ್